KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಜುಲೈ ೨೩, ೨೦೦೯ (ಶ್ರಾವಣ ೧, ಶಕ ವರ್ಷ ೧೯೩೧) | ಸಂಚಿಕೆ ೩೦ |
|---|---|---|

## ಭಾಗ – ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಸಹಾಯಕ ಕಾರ್ಮಿಕ ಆಯುಕ್ತರ ಕಛೇರಿ, ಕೆ.ಹೆಚ್.ಬಿ. ಕಾಂಪ್ಲೆಕ್ಸ್, ಬಾರ್‌ಲೈನ್ ರಸ್ತೆ, ಚಿಕ್ಕಮಗಳೂರು

**ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ/ಎಸ್‌ಟಿವೈ/ಸಿಆರ್–40/1999–2000**

**ವಿಷಯ:** ಸಹಾಯಕ ಕಾರ್ಮಿಕ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು, ಕಛೇರಿಯ ವಾಹನ ಸಂಖ್ಯೆ/ಸಿಎಜಿ–804ನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

**ಉಲ್ಲೇಖ:** 1) ಕಾರ್ಮಿಕ ಆಯುಕ್ತರು, ಬೆಂಗಳೂರು, ಇವರ ಕಛೇರಿ ಆದೇಶ ಸಂಖ್ಯೆ/ಎಸ್‌ಟಿವೈ/ಸಿಆರ್–36/2006–07, ದಿನಾಂಕ:24.06.2008

2) ಮಾನ್ಯ ಜಿಲ್ಲಾಧಿಕಾರಿಗಳು, ಚಿಕ್ಕಮಗಳೂರು ಜಿಲ್ಲೆ, ಇವರ ಪತ್ರ ಸಂಖ್ಯೆ/ಇಎಸ್‌ಟಿ(3)/ಸಿಆರ್–68/2008–09, ದಿನಾಂಕ:01.09.2008.

ಸಹಾಯಕ ಕಾರ್ಮಿಕ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು ಕಛೇರಿಯ ದುರಸ್ಥಿಯಲ್ಲಿರುವ ಇಲಾಖಾ ವಾಹನ ಸಂಖ್ಯೆ/ಸಿಎಜಿ–804ರ ಡೀಸೆಲ್ ಚಾಲಿತ ಜೀಪನ್ನು ಈ ಕೆಳಗೆ ವಿವರಿಸಿದಂತೆ ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ಇರುವ ಸ್ಥಳದಲ್ಲಿ ಯಾವ ರೀತಿ ಇದೆಯೋ ಅದೇ ರೀತಿಯ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು. ಇಚ್ಛೆವುಳ್ಳ ಸಾರ್ವಜನಿಕರು ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಬಿಡ್ ಸವಾಲು ಮಾಡಬಹುದಾಗಿದೆ.

| ವಾಹನ ಸಂಖ್ಯೆ ಮತ್ತು ಮಾದರಿ | ವಿಕ್ರಯದ ಕ್ರಮ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ಮತ್ತು ವೇಳೆ | ಹರಾಜಿನ ದಿನಾಂಕ ಮತ್ತು ವೇಳೆ | ಮುಂಗಡ ಠೇವಣಿ ಮೊತ್ತ (ಇ.ಎಂ.ಡಿ.) | ಬಹಿರಂಗ ಹರಾಜು ಮಾಡುವ ಸ್ಥಳ |
|---|---|---|---|---|---|
| ಸಿಎಜಿ–804 1984ರ ಸಾಲಿನ ಡೀಸೆಲ್ ಚಾಲಿತ ಜೀಪು | ಟೆಂಡರ್ ಕಂ ಬಹಿರಂಗ ಹರಾಜು | ದಿ/27.08.2009 ಸಂಜೆ/5.30ಗಂಟೆಗೆ | ದಿ/29.08.2009 ಬೆಳಿಗ್ಗೆ/11.30 | ರೂ.5,000=00 (ಐದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಸಹಾಯಕ ಕಾರ್ಮಿಕ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು, ಇವರ ಹೆಸರಿನಲ್ಲಿ ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಪಡೆದ ಡಿ.ಡಿ.ಯನ್ನು ಟೆಂಡರುದಾರರ ಮೊಹರು ಮಾಡಿದ ಲಕೋಟೆಯೊಡನೆ ಸಲ್ಲಿಸಬೇಕು. ಬಹಿರಂಗ ಹರಾಜಿನಲ್ಲಿ ಭಾಗವಹಿಸುವವರು ನಗದು ರೂಪದಲ್ಲಿ ಠೇವಣಿಯನ್ನು ಪಾವತಿ ಮಾಡಬೇಕು. | ಸಹಾಯಕ ಕಾರ್ಮಿಕ ಆಯುಕ್ತರ ಕಛೇರಿ, ಕೆ.ಹೆಚ್.ಬಿ.ಕಾಂಪ್ಲೆಕ್ಸ್ ಬಾರ್‌ಲೇನ್ ರಸ್ತೆ, ಚಿಕ್ಕಮಗಳೂರು |

**ಸೂಚನೆಗಳು**

1. ಟೆಂಡರುಗಳನ್ನು ದಿನಾಂಕ:29.08.2009ರಂದು ಹರಾಜು ಮುಗಿದ ನಂತರ ತೆರೆಯಲಾಗುವುದು.
2. ಟೆಂಡರ್ ಹಾಗೂ ಬಹಿರಂಗ ಹರಾಜು ಎರಡರಲ್ಲೂ ಭಾಗವಹಿಸಲು ಇಚ್ಛಿಸುವವರು ಟೆಂಡರ್ ಜೊತೆ ರೂ.500=00ಗಳ ಡಿ.ಡಿ.ಸಲ್ಲಿಸಬೇಕು ಮತ್ತು ಹರಾಜಿನಲ್ಲಿ ಭಾಗವಹಿಸಲಿಚ್ಛಿಸುವವರು ಠೇವಣಿ ಹಣ ರೂ.5,000=00ಗಳನ್ನು ಪ್ರತ್ಯೇಕವಾಗಿ ನಗದು ಪಾವತಿಸಬೇಕು.
3. ಬಹಿರಂಗ ಹರಾಜು ಒಂದರಲ್ಲಿ ಮಾತ್ರ ಭಾಗವಹಿಸುವುದಾದರೆ ರೂ.5,000=00ಗಳ ನಗದು ಠೇವಣಿ ಪಾವತಿಸಬೇಕು.

**ಷರತ್ತುಗಳು**

1. ವಾಹನಕ್ಕೆ ಟೆಂಡರ್ ಸಲ್ಲಿಸುವವರು ಅಥವಾ ವಾಹನವನ್ನು ಪಡೆಯಲಿಚ್ಛಿಸುವವರು ಬಿಳಿ ಹಾಳೆಯಲ್ಲಿ ಗರಿಷ್ಠ ಮೊತ್ತವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ನಮೂದಿಸಿ ರೂ.5,000=00ಗಳ ಡಿ.ಡಿ.ಯನ್ನು ಲಗತ್ತಿಸಿ, ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆ ಮೇಲೆ ವಾಹನ ಸಂಖ್ಯೆ/ಸಿಎಜಿ–804ಕ್ಕೆ ಟೆಂಡರು ಎಂದು ದಪ್ಪ ಅಕ್ಷರಗಳಲ್ಲಿ ನಮೂದಿಸುವುದು ಹಾಗೂ ಟೆಂಡರುದಾರರ ವಿಳಾಸವನ್ನು ತಪ್ಪದೇ ಬರೆದು ಸಲ್ಲಿಸಬೇಕು.
2. ಗರಿಷ್ಠ ಬೆಲೆಯ ಟೆಂಡರ್/ಬಹಿರಂಗ ಹರಾಜಿನ ಮೊತ್ತದ ಮೇಲೆ ನಿಯಮಾನುಸಾರ ಮಾರಾಟ ತೆರಿಗೆ ಮತ್ತು ಸೆಸ್ಸನ್ನು ಪಾವತಿ ಮಾಡತಕ್ಕದ್ದು.
3. ವಾಹನವನ್ನು ಕಛೇರಿಯ ಆವರಣದಲ್ಲಿ ಕಛೇರಿಯ ಕೆಲಸದ ದಿನಗಳು, ಕಛೇರಿಯ ವೇಳೆಯಲ್ಲಿ ವಾಹನವಿರುವ ಸ್ಥಳದಲ್ಲಿ ಪರಿಶೀಲಿಸಬಹುದು.
4. ಕರೆಯಲಾಗಿರುವ ಟೆಂಡರ್ / ಹರಾಜಿನ ಬಗೆ ಯಾವುದೇ ವಿಧವಾದ ವಿವಾದ ಉಂಟಾದ ಪಕ್ಷದಲ್ಲಿ ತಿರಸ್ಕರಿಸುವ, ಮುಂದೂಡುವ ಹಾಗೂ ರದ್ದುಪಡಿಸುವ ಎಲ್ಲಾ ಅಧಿಕಾರವು ಸಹಾಯಕ ಕಾರ್ಮಿಕ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು, ಇವರಿಗೆ ಇರುತ್ತದೆ.
5. ಎಲ್ಲಾ ವಿಷಯದಲ್ಲಿ ಸಹಾಯಕ ಕಾರ್ಮಿಕ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು ಇವರ ತೀರ್ಮಾನವೇ ಅಂತಿಮವಾಗಿರುವುದು. ಭಾಗವಹಿಸುವ ಎಲ್ಲಾ ಟೆಂಡರುದಾರರು ಮತ್ತು ಬಿಡ್‌ದಾರರು ಈ ತೀರ್ಮಾನಕ್ಕೆ ಬದ್ಧರಾಗಿರಬೇಕಾಗುತ್ತದೆ.
6. ಗರಿಷ್ಠ ಮೊತ್ತದ ಬಿಡ್‌ದಾರರು ವಾಹನಕ್ಕೆ ಬಿಡ್ ಮೊಬಲಗಿನ ಶೇ. 25ರಷ್ಟು ಹಣವನ್ನು ಸ್ಥಳದಲ್ಲಿಯೇ ನಗದಾಗಿ ಪಾವತಿಸಿ, ರಸೀತಿ ಪಡೆದು ಉಳಿಕೆ 75ರಷ್ಟು ಹರಾಜು ಮೊತ್ತವನ್ನು ಹಾಗೂ ತೆರಿಗೆ, ಸರ್ಚಾರ್ಜ್ ನಿಯಮಾನುಸಾರ ವಗೈರೆ ಪಾವತಿಸಿ, ಕಾರ್ಮಿಕ ಆಯುಕ್ತರು ಬೆಂಗಳೂರು, ಇವರಿಂದ ಸ್ಥಿರೀಕರಣ ಆದೇಶ ಪಡೆದ ನಂತರ ಈ ಕಛೇರಿಯಿಂದ ವಾಹನವನ್ನು ತೆಗೆದುಕೊಂಡು ಹೋಗಬಹುದಾಗಿರುತ್ತದೆ.
7. ಹರಾಜು ಕಾರ್ಮಿಕ ಆಯುಕ್ತರು, ಬೆಂಗಳೂರು, ಇವರ ಸ್ಥಿರೀಕರಣಕ್ಕೆ ಒಳಪಟ್ಟಿರುತ್ತದೆ. ಇದಕ್ಕೆ ಬಿಡ್‌ದಾರರು ಬದ್ಧರಾಗಿರಬೇಕು.
8. ವಾಹನವನ್ನು ಹರಾಜಿನಲ್ಲಿ ಪಡೆದ ಸವಾಲುದಾರರು ವಾಹನದ ಮಾಲೀಕತ್ವದ ವರ್ಗಾವಣೆ ಹಾಗೂ ಇನ್ನಿತರೆ ದಾಖಲಾತಿಗಳನ್ನು ಅವರ ಸ್ವಂತ ಖರ್ಚಿನಲ್ಲಿ, ಸ್ವಂತ ಜವಾಬ್ದಾರಿಯಲ್ಲಿ ಮಾಡಿಸಿಕೊಳ್ಳತಕ್ಕದ್ದು. ಹಾಗೂ ಈ ಬಗ್ಗೆ 15 ದಿನಗಳೊಳಗಾಗಿ ವರದಿ ಸಲ್ಲಿಸತಕ್ಕದ್ದು.
9. ಗರಿಷ್ಠ ಟೆಂಡರ್ ಮೊತ್ತ ನಮೂದಿಸಿರುವ ಟೆಂಡರುದಾರರು / ಬಿಡ್‌ದಾರರು ನಿರ್ದಿಷ್ಟಪಡಿಸಿದ ಅವಧಿಯೊಳಗೆ ವಾಹನವನ್ನು ಪೂರ್ಣ ಹಣ ಸಂದಾಯ ಮಾಡಿ ತೆಗೆದುಕೊಂಡು ಹೋಗದಿದ್ದಲ್ಲಿ, ಅವರ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ನಂತರದ ಗರಿಷ್ಠ ಮೊತ್ತ ನಮೂದಿಸಿದ ಟೆಂಡರುದಾರರು/ಬಿಡ್‌ದಾರರುಗಳಿಗೆ ವಾಹನವನ್ನು ವಿಲೇವಾರಿ ಮಾಡಿ ವ್ಯತ್ಯಾಸದ ಹಣವನ್ನು ಮೊದಲನೇ ಟೆಂಡರುದಾರರಿಂದ / ಬಿಡ್‌ದಾರರಿಂದ ವಸೂಲಿ ಮಾಡಲಾಗುವುದು. ಇದೇ ಕ್ರಮವನ್ನು ಎರಡನೇ ಮತ್ತು ಮೂರನೇ ಟೆಂಡರುದಾರರು / ಬಿಡ್‌ದಾರರುಗಳಿಗೂ ಅನ್ವಯಿಸುವಂತೆ ಮಾಡಲಾಗುವುದು.
10. ಗರಿಷ್ಠ ಮೊತ್ತ ನಮೂದಿಸಿರುವ ಕ್ರಮವಾಗಿ 1,2,3. ಇವರ ಠೇವಣಿ ಹಣವನ್ನು ವಾಹನದ ಹರಾಜಿನ ಕ್ರಮ ಇತ್ಯರ್ಥವಾಗುವವರೆಗೆ ಇಟ್ಟುಕೊಳ್ಳಲಾಗುವುದು.

**ಎ.ಜೆ. ಶ್ರೀವಳ್ಳಿ**

ಪಿ.ಆರ್. 497 ಸಹಾಯಕ ಕಾರ್ಮಿಕ ಆಯುಕ್ತರು, ಚಿಕ್ಕಮಗಳೂರು ವಿಭಾಗ, ಚಿಕ್ಕಮಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಅರಣ್ಯ ಸಂಚಾರಿ ದಳ, 18ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು – 560 003,**

**ಮರು ಬಹಿರಂಗ ಹರಾಜು ಪ್ರಕಟಣೆ**

**ಸಂಖ್ಯೆ:ಎ2/ಉಅಸಂ/ಹಪ್ರ.ವಾ/ಸಿ.ಆರ್– /08–09, ದಿನಾಂಕ: 3ನೇ ಜುಲೈ 2009**

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಇಲಾಖೆಯ ವಾಹನ ಸಂಖ್ಯೆ:ಕೆಎ–01–ಜಿ–2008 (ಅಂಬಾಜಿಡರ್ ಕಾರ್) ಸವಕಳಿ ವಾಹನವನ್ನು ದಿನಾಂಕ:28–02–2008ರಂದು ಬೆಳಿಗ್ಗೆ 11.00 ಗಂಟೆಗೆ ಜಾರಕಬಂಡೆ ಕಾವಲು ಅರಣ್ಯ ಸಂಕೀರ್ಣ, ಬೆಂಗಳೂರು ರಲ್ಲಿ ಬಹಿರಂಗ ಹರಾಜು ಮೂಲಕ ವಿಲೇವಾರಿ ಮಾಡಿದ್ದು, ಬಿಡ್‌ಮೊತ್ತ ಕಡಿಮೆಯಾಗಿದ್ದುದರಿಂದ ಸದರಿ ವಾಹನವು ಎಲ್ಲಿದೆಯೋ ಅಲ್ಲಿ, ಹೇಗಿದೆಯೋ ಅದೇ ಸ್ಥಿತಿಯಲ್ಲಿ ದಿನಾಂಕ:03–08–2009 ರಂದು ಬೆಳಿಗ್ಗೆ:11.00 ಗಂಟೆಗೆ ಜಾರಕಬಂಡೆ ಕಾವಲು ಅರಣ್ಯ ಸಂಕೀರ್ಣ, ಬೆಂಗಳೂರು ರಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಮರು ಬಹಿರಂಗ ಹರಾಜು ಮೂಲಕ ಮಾರಾಟ ಮಾಡುತ್ತಾರೆ. ಸದರಿ ದಿನಾಂಕದಂದು ಬಹಿರಂಗ ಹರಾಜು ಯಶಸ್ವಿಯಾಗಿ ನಡೆಯದೇ ಇದ್ದಲ್ಲಿ, ದಿನಾಂಕ:10–08–2009ರಂದು ಬೆಳಿಗ್ಗೆ 11.00 ಗಂಟೆಗೆ ಸದರಿ ಸ್ಥಳದಲ್ಲಿಯೇ ಮುಂದೂಡಲಾಗುತ್ತದೆ. ಇಷ್ಟವುಳ್ಳ ಬಿಡ್ಡುದಾರರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಹಿರಂಗ ಹರಾಜಿನಲ್ಲಿ ಪಾಲುಗೊಳ್ಳಬಹುದು.

| ಕ್ರ.ಸಂ | ವಾಹನ ಸಂಖ್ಯೆ | ಮಾದರಿ / ವಿವರ | ವಾಹನ ಇರುವ ಸ್ಥಳ |
|---|---|---|---|
| 1 | KA-01-G-2008 | 1995 – ಅಂಬಾಜಿಡರ್ ಸವಕಳಿ (Scrap) | ಜಾರಕಬಂಡೆ ಕಾವಲು ಅರಣ್ಯ ಸಂಕೀರ್ಣ, ಬೆಂಗಳೂರು |

ಹೆಚ್ಚಿನ ವಿವರಗಳು ಅವಶ್ಯವಿದ್ದಲ್ಲಿ ಈ ಕಛೇರಿಯ ಕರ್ತವ್ಯದ ವೇಳೆಯಲ್ಲಿ (ರಜಾ ದಿನ ಹೊರತುಪಡಿಸಿ) ಪಡೆಯಬಹುದಾಗಿರುತ್ತದೆ.

**ಹರಾಜಿನ ಷರತ್ತುಗಳು**

1. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು ಹರಾಜು ಪ್ರಾರಂಭವಾಗುವ ಮುನ್ನ ವಾಹನ ನಿಲ್ಲಿಸಿರುವ ಆವರಣದಲ್ಲಿ ವಾಹನವನ್ನು ಪರೀಕ್ಷಿಸಿ ತಪಾಶಿಸಿಕೊಂಡು ಇಚ್ಛೆ ಇದ್ದಲ್ಲಿ ಹರಾಜಿನಲ್ಲಿ ಭಾಗವಹಿಸಬಹುದಾಗಿರುತ್ತದೆ. ವಾಹನವು ಎಲ್ಲಿದೆಯೋ ಅಲ್ಲಿ, ಹೇಗಿದೆಯೋ ಹಾಗೆ ಇರುವ ಆಧಾರದ ಮೇಲೆ ಹರಾಜು ಮಾಡಲಾಗುವುದು. ಹರಾಜು ಮುಗಿದ ನಂತರ ಯಾವ ದೂರನ್ನು ಪರಿಗಣಿಸುವುದಿಲ್ಲ.
2. ಬಿಡ್ಡುದಾರರು ವಾಹನವನ್ನು ಎಲ್ಲಿದೆಯೋ ಅಲ್ಲಿ, ಹೇಗಿದೆಯೋ ಹಾಗೆ ಸ್ಥಿತಿಯಲ್ಲಿ ಪರಿಶೀಲಿಸಿದ್ದಾರೆಂದು ಭಾವಿಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವ ಪ್ರತಿಯೊಬ್ಬರು ಹರಾಜಿನ ಮುನ್ನ ರೂ.5,000–00 ಗಳನ್ನು ಇ.ಎಂ.ಡಿ ಯಾಗಿ ನಗದು ಅಥವಾ ಈ ಕಛೇರಿ ಹೆಸರಿನಲ್ಲಿ ಡಿ.ಡಿ ರೂಪದಲ್ಲಿ ಸಲ್ಲಿಸಬೇಕಾಗಿರುತ್ತದೆ. ಇ.ಎಂ.ಡಿ ಮೊತ್ತವನ್ನು ಪಾವತಿಸಿದವರು ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ. ಇ.ಎಂ.ಡಿ ಯನ್ನು ಪಾವತಿಸಿರುವ ಬಿಡ್ಡುದಾರರು ಹರಾಜಿನಲ್ಲಿ ಯಶಸ್ವಿಯಾದಲ್ಲಿ ಅಂತಹವರ ಮೊತ್ತವನ್ನು ವಾಹನದ ಹರಾಜಿನ ಮೊತ್ತಕ್ಕೆ ಜಮಾ ಮಾಡಿಕೊಳ್ಳಲಾಗುವುದು.
4. ಹರಾಜು ಮುಗಿದ ತಕ್ಷಣ ಹರಾಜಿನ ನಂತರ ಯಶಸ್ವಿ ಬಿಡ್ಡುದಾರರು ಹರಾಜಿನಲ್ಲಿ ಕೂಗಿರುವ ಮೊತ್ತ ಹಾಗೂ ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳನ್ನು ಸಹಾ ಪಾವತಿಸಬೇಕಾಗಿರುತ್ತದೆ. ತಪ್ಪಿದಲ್ಲಿ ಹರಾಜಿಗೆ ಭಾಗವಹಿಸಲು ಕಟ್ಟಿರುವ ಇ.ಎಂ.ಡಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮರು ಹರಾಜನ್ನು ಮೂಲ ಬಿಡ್ಡುದಾರರ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ಲುಕ್ಸಾನನ್ನು ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ ಹಾಗೂ ಮರು ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುವುದಿಲ್ಲ.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಅಥವಾ ಮುಂದೂಡುವ ಹಕ್ಕು ಈ ಕೆಳ ಸಹಿದಾರರಿಗೆ ಇರುತ್ತದೆ. ಅಲ್ಲದೇ ಈ ಕೆಳ ಸಹಿದಾರರಾಗಲಿ ಅಥವಾ ಈ ಕಛೇರಿಯಿಂದ ಅನುಮೋದಿಸಲ್ಪಟ್ಟ ಅಧಿಕಾರಿಯವರು ವಾಹನ ಹರಾಜನ್ನು ಮಾಡಬಹುದಾಗಿರುತ್ತದೆ.
6. ಮೇಲ್ಕಂಡ ವಾಹನವನ್ನು ಅನುಪಯುಕ್ತಗೊಳಿಸಿ ಸವಕಳಿ ಎಂದು ಪರಿಗಣಿಸಿರುವುದರಿಂದ ಸದರಿ ವಾಹನವು ಉಪಯೋಗಿಸಲು ಅಥವಾ ಪುನಃ ನೊಂದಾಣಿಯನ್ನು ಪಡೆಯಲು ಅರ್ಹವಿರುವುದಿಲ್ಲ.
7. ಯಶಸ್ವಿ ಬಿಡ್ಡುದಾರರು ಪೂರ್ಣ ಮೊಬಲಗನ್ನು ಪಾವತಿಸಿ ವಾಹನವನ್ನು ತೆಗೆದುಕೊಂಡು ಹೋಗಬೇಕಾಗಿರುತ್ತದೆ. ಒಂದು ವೇಳೆ ವಿಳಂಬ ಮಾಡಿದ್ದಲ್ಲಿ ವಿಳಂಬದ ಅವಧಿಗೆ ಸಂಬಂಧಿಸಿದವರು ನೆಲ ಬಾಡಿಗೆಯನ್ನು ಕಟ್ಟಬೇಕಾಗಿರುತ್ತದೆ.

8. ಹರಾಜು ಮಂಜೂರಾತಿಯಾದ 30 ದಿವಸದ ಒಳಗಾಗಿ ಬಿಡ್ದುದಾರರು ಬಾಕಿ ಉಳಿದ ಮೊತ್ತವನ್ನು ಪೂರ್ಣವಾಗಿ ಪಾವತಿಸಿ ವಾಹನವನ್ನು ತಮ್ಮ ವಶಕ್ಕೆ ತೆಗೆದುಕೊಳ್ಳತಕ್ಕದ್ದು. ಬಿಡ್ದುದಾರರು ವಾಹನವನ್ನು ನಿಗದಿಪಡಿಸಿದ ಅವಧಿಯಲ್ಲಿ ತೆಗೆದುಕೊಂಡು ಹೋಗದಿದ್ದ ಪಕ್ಷದಲ್ಲಿ ಕಳ್ಳತನ, ಬೆಂಕಿ ಹಾಗೂ ಇತರೆ ಯಾವುದೇ ನಷ್ಟಕ್ಕೆ ಒಳಗಾದಲ್ಲಿ ಇಲಾಖೆ ಜವಾಬ್ದಾರರಾಗಿರುವುದಿಲ್ಲ.
9. ವಾಹನಗಳ ಹರಾಜಿನ ಬಗ್ಗೆ ಇಲಾಖೆ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.

**ಎಸ್. ಕುಮಾರಸ್ವಾಮಿ**

ಪಿ.ಆರ್. 553 ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು.

**ಜಲಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)**

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ**

**ಟೆಂಡರ್ ಪ್ರಕಟಣೆ ಸಂಖ್ಯೆ ಸಂ: ಕಾಪಾಇಂ:ಸನೀವಿ:ಶಿ:ಸಇಂ–1:1474, ದಿನಾಂಕ: 22ನೇ ಜೂನ್ 2009**

**ಮರು ಟೆಂಡರ್ ಪ್ರಕಟಣೆ (ದ್ವಿ–ಲಕೋಟೆ ಪದ್ಧತಿ) (ಸ್ಟ್ಯಾಂಡರ್ಡ್ ಟೆಂಡರ್ ಪದ್ಧತಿ)**

ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ನೋಂದಾಯಿತ ಮೊದಲನೇ ಸಿವಿಲ್ ಮತ್ತು ಎಲೆಕ್ಟ್ರಿಕಲ್ ಗುತ್ತಿಗೆದಾರರಿಂದ ಈ ಕೆಳಕಂಡ ಕಾಮಗಾರಿಗಳಿಗೆ ಐಟಂವಾರು ಟೆಂಡರ್‌ನ್ನು ದ್ವಿ–ಲಕೋಟೆ ಪದ್ಧತಿಯಲ್ಲಿ, ದ್ವಿ ಪ್ರತಿಗಳಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ರೂಲ್ ನಂ.28 ರ ಪ್ರಕಾರ ಕರ್ನಾಟಕ ರಾಜ್ಯ ಸರ್ಕಾರದ ರಾಜ್ಯಪಾಲರ ಪರವಾಗಿ, ಈ ಕೆಳಗೆ ಸಹಿ ಮಾಡಿದ ಅಧಿಕಾರಿಗಳಿಂದ ಆಹ್ವಾನಿಸಲಾಗಿದೆ. ಲಗತ್ತಿಸಿರುವಂತೆ ಕೆಲಸದ ಅನುಭವವಿರುವ ಗುತ್ತಿಗೆದಾರರು ಭಾಗವಹಿಸಬಹುದು.

1. ಗುತ್ತಿಗೆದಾರರು ಲಕೋಟೆ 1 ಅನ್ನು ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆ ಮೇಲೆ ಲಕೋಟೆ 1 ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.
2. ಗುತ್ತಿಗೆದಾರರು ಲಕೋಟೆ 2 ದ್ವಿಪ್ರತಿಗಳಲ್ಲಿ ನಿಗದಿತ ರೀತಿಯಲ್ಲಿ ಭರ್ತಿಮಾಡಿ ಅವಶ್ಯಕ ದೃಢೀಕೃತ ದಾಖಲಾತಿಗಳನ್ನು ಲಗತ್ತಿಸಿ, ಲಕೋಟೆಯಲ್ಲಿ ಮೊಹರು ಮಾಡಿ, ಲಕೋಟೆ ಮೇಲೆ ಲಕೋಟೆ 2 ಎಂದು ನಮೂದಿಸಿ, ಕಾಮಗಾರಿಯ ಹೆಸರು ಮತ್ತು ಗುತ್ತಿಗೆದಾರರ ಪೂರ್ಣ ವಿಳಾಸವನ್ನು ನಮೂದಿಸತಕ್ಕದ್ದು.

ಮೇಲ್ಕಂಡ ಲಕೋಟೆ 1 ಮತ್ತು ಲಕೋಟೆ 2, ಎರಡನ್ನೂ ಇನ್ನೊಂದು ಲಕೋಟೆಯಲ್ಲಿ ಹಾಕಿ ಕಾಮಗಾರಿ ಹೆಸರು ಹಾಗೂ ಗುತ್ತಿಗೆದಾರರ ಪೂರ್ಣ ವಿಳಾಸ ನಮೂದಿಸಿ, ಮೊಹರು ಮಾಡಿರುವ ಟೆಂಡರ್‌ಗಳನ್ನು ಈ ಕೆಳಗೆ ಸಹಿ ಮಾಡಿದ ಕಾರ್ಯಾಲಯದಲ್ಲಿ ಈ ಕೆಳಗೆ ಸೂಚಿಸಿದ ದಿನಾಂಕದಂದು ಸಂಜೆ 4.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್ ಈ ಕೆಳಗೆ ಸಹಿ ಮಾಡಿದವರಿಂದ ನಮೂದಿಸಿರುವ ದಿನಾಂಕದಂದು ಅಥವಾ ಇತರೆ ಅನುಕೂಲಕರವಾದ ದಿನಾಂಕದಂದು ಟೆಂಡರ್‌ದಾರರ ಅಥವಾ ಅವರ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು. ಈ ಕೆಳಗೆ ನಮೂದಿಸಿರುವ ದಿನಾಂಕಗಳು ಸಾರ್ವಜನಿಕ ದಿನಾಂಕವಾದರೆ ಮಾರನೆಯ ಕೆಲಸದ ದಿನವೇ ಅನ್ವಯಿಸುತ್ತದೆ ಎಂದೂ ಅರ್ಥೈಸಿಕೊಳ್ಳತಕ್ಕದ್ದು.

ಲಕೋಟೆ 1ನ್ನು ಮೊದಲು (ಸಾಧ್ಯವಾದರೆ ಟೆಂಡರ್ ಸ್ವೀಕರಿಸುವ ದಿನಾಂಕದಂದೇ) ತೆರೆಯಲಾಗುವುದು. ಗುತ್ತಿಗೆದಾರರು ಇದರಲ್ಲಿ ಒದಗಿಸಲಾದ ವಿವರಗಳನ್ನು ಪರಿಶೀಲಿಸಲಾಗುವುದು. ತೃಪ್ತಿಕರವಾದ ವಿವರಗಳನ್ನು ಸಲ್ಲಿಸಿದ ಗುತ್ತಿಗೆದಾರರ ಲಕೋಟೆ 1ರ ವಿವರಗಳನ್ನು ಸಕ್ಷಮ ಪ್ರಾಧಿಕಾರದಿಂದ ಅನುಮೋದನೆಯಾದ ನಂತರ ಅರ್ಹರಾದ ಗುತ್ತಿಗೆದಾರರ 2ನೇ ಲಕೋಟೆಯನ್ನು ಮಾತ್ರ ತೆರೆಯಲಾಗುವುದು. 2ನೇ ಲಕೋಟೆ ತೆರೆಯುವ ದಿನಾಂಕವನ್ನು ಅರ್ಹ ಗುತ್ತಿಗೆದಾರರಿಗೆ ಲಿಖಿತವಾಗಿ ತಿಳಿಸಲಾಗುವುದು. 1ನೇ ಲಕೋಟೆಯಲ್ಲಿ ಅನರ್ಹರಾದ ಗುತ್ತಿಗೆದಾರರ 2ನೇ ಲಕೋಟೆಯನ್ನು ತೆರೆಯಲಾಗುವುದಿಲ್ಲ. ಈ ವಿಷಯದಲ್ಲಿ ಸಕ್ಷಮ ಅಧಿಕಾರಿಗಳ ನಿರ್ಧಾರವು ಅಂತಿಮವಾಗಿರುತ್ತದೆ.

1. ಈ ಕಛೇರಿಯಲ್ಲಿ ಖಾಲಿ ಟೆಂಡರ್ ಫಾರಂಗಳನ್ನು ದಿ:10.08.2009 ರಿಂದ ದಿ: 12.08.2009ರ ವರೆಗೆ ಕೊಂಡುಕೊಳ್ಳಬಹುದು (ಟೆಂಡರ್ ಫಾರಂ ಬೆಲೆ ಹಿಂತಿರುಗಿಸಲಾಗುವುದಿಲ್ಲ)
2. ಟೆಂಡರ್ ಜೊತೆಗೆ ಇ.ಎಂ.ಡಿ. ಯನ್ನು ಕೆಳಗೆ ತೋರಿಸಿದ ನಮೂನೆ ಪ್ರಕಾರ ಕಟ್ಟಬೇಕಾಗುತ್ತದೆ ಮತ್ತು 45 ದಿನಗಳ ಮಟ್ಟಿಗೆ ವ್ಯಾಲಿಡಿಟಿ ಇರಬೇಕು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: 20.08.2009ರ ಸಂಜೆ 4.00 ಮತ್ತು 1ನೇ ಲಕೋಟೆ ಟೆಂಡರ್ ಅನ್ನು ಸಂಜೆ 5.00 ಗಂಟೆಗೆ ತೆರೆಯಲಾಗುವುದು. ಕಛೇರಿಯ ಆ ದಿನ ಮುಚ್ಚಿದ್ದರೆ ಮರುದಿನ ಅದೇ ಸಮಯಕ್ಕೆ ಫಾರಂಗಳನ್ನು ಸ್ವೀಕರಿಸಲಾಗುವುದು.
4. ಪ್ರೀ ಟೆಂಡರ್ ಸಭೆಯನ್ನು ದಿ:17.08.2009 ಸಂಜೆ 3.00 ಗಂಟೆಗೆ ಈ ಕಛೇರಿಯಲ್ಲಿ ಏನಾದರೂ ವಿಚಾರಣೆಗಳಿದ್ದರೆ ಕೇಳಬಹುದು.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರ್ ಮೊತ್ತ (ಲಕ್ಷಗಳಲ್ಲಿ) | ಇ.ಎಂ.ಡಿ. ಮೊತ್ತ (ರೂ.ಗಳಲ್ಲಿ) | ಖಾಲಿ ಟೆಂಡರ್ ಫಾರಂ ಬೆಲೆ (ಹಿಂದಿರುಗಿಸ ಲಾರದಂಥದ್ದು) ತೆರಿಗೆ ಸೇರಿ (ರೂ. ಗಳಲ್ಲಿ) | ಕಾಲಮಿತಿ ಮಳೆಗಾಲ ಸೇರಿ |
|---|---|---|---|---|---|
| 1 | ಶಿವಮೊಗ್ಗ ಜಿಲ್ಲೆ, ತೀರ್ಥಹಳ್ಳಿ ತಾ॥ ತುಂಗಾ ನದಿಯಿಂದ ಮಹಿಷಿ ಮತ್ತು ಹೆದ್ದೂರು ಗ್ರಾಮಗಳಿಗೆ ಏತ ನೀರಾವರಿ ಯೋಜನೆ | 152.50 | 3,04,000/– | 20,000/– | 15 ತಿಂಗಳು |

**ಅರ್ಜಿ ಸಲ್ಲಿಸುವ ವಿಧಾನ:**

ಗುತ್ತಿಗೆದಾರರು ಖಾಲಿ ಟೆಂಡರ್ ಫಾರಂಗಳನ್ನು ಸಲುವಾಗಿ ಅರ್ಜಿ ಸಲ್ಲಿಸುವಾಗ ಈ ಕೆಳಗೆ ತೋರಿಸಿದ ಮೂಲ ಪ್ರಮಾಣ ಪತ್ರಗಳನ್ನು ತೋರಿಸಿ ಪರಿಶೀಲನೆಗೊಳಪಡಿಸಿ, ಅರ್ಜಿಯೊಂದಿಗೆ ನಕಲು ಪ್ರತಿಗನ್ನು ಲಗತ್ತಿಸುವುದು.

1. ಕೆ.ಪಿ.ಡಬ್ಲ್ಯೂ.ಡಿ ಕರ್ನಾಟಕ ರಾಜ್ಯದ ಗುತ್ತಿಗೆದಾರರ ನೊಂದಣಿ ಪ್ರಮಾಣ ಪತ್ರ.
2. ಇತ್ತೀಚಿನ ವರಮಾನ ತೆರಿಗೆಯ ಕ್ಲಿಯರೆನ್ಸ್ ಪ್ರಮಾಣ ಪತ್ರ.
3. ಇತ್ತೀಚಿನ ಕರ್ನಾಟಕ ರಾಜ್ಯ ಮಾರಾಟ ತೆರಿಗೆಯ ಕ್ಲಿಯರೆನ್ಸ್ ಪ್ರಮಾಣ ಪತ್ರ.
4. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3 ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳನ್ನು ಹೊಂದಿರಬೇಕು.
5. ಅಂಚೆ ಮೂಲಕ ಟೆಂಡರ್ ಪಡೆಯಬೇಕಾದಲ್ಲಿ ಟೆಂಡರ್ ಫಾರಂ ಬೆಲೆಗೆ ರೂ. 200.00 ಹೆಚ್ಚುವರಿಯಾಗಿ ಸೇರಿಸತಕ್ಕದ್ದು. ಅಂಚೆ ವಿಳಂಬ ಅಥವಾ ಖಾಲಿ ಟೆಂಡರ್ ಅರ್ಜಿದಾರರನ್ನು ಅಂಚೆ ಮೂಲಕ ತಲುಪುವ ಖಾತರಿಯನ್ನು ಈ ಇಲಾಖೆ ನೀಡುವುದಿಲ್ಲ.

**ಖಾಲಿ ಟೆಂಡರ್ ಫಾರಂಗಳಿಗೆ ಹಣ ಸಂದಾಯ ಮಾಡುವ ವಿಧಾನ:**

ಡಿ.ಡಿ. ಅಥವಾ ಬ್ಯಾಂಕ್‌ನ ಚೆಕ್‌ನ್ನು ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿಗೆ ಪಡೆದು ಅರ್ಜಿಯೊಂದಿಗೆ ಲಗತ್ತಿಸಬೇಕು. ಈ ಮೊದಲೇ ಅರ್ಜಿ ಸಲ್ಲಿಸಿ ದುಡ್ಡು ತುಂಬಿದಲ್ಲಿ ಈಗ ಹೊಸದಾಗಿ ಅರ್ಜಿ ಸಲ್ಲಿಸಬೇಕು, ಹಣ ಪಾವತಿಯನ್ನು ಪರಿಗಣಿಸಲಾಗುವುದು. ಆದರೆ ಹಿಂದಿರುಗಿಸಲಾಗುವುದಿಲ್ಲ.

**ಇ.ಎಂ.ಡಿ. ಸಲ್ಲಿಸುವ ವಿಧಾನ:**

ನಿಗದಿತ ಇ.ಎಂ.ಡಿ. ಯನ್ನು ಕಡ್ಡಾಯವಾಗಿ ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ/ಪೇ ಆರ್ಡರ್/ಎಫ್.ಡಿ.ಆರ್ ಅಥವಾ ರಾಷ್ಟ್ರೀಯ ಉಳಿತಾಯ ಪತ್ರಗಳ ರೂಪದಲ್ಲಿ ಸಲಿಸಬಹುದು. ರಾಷ್ಟ್ರೀಯ ಉಳಿತಾಯ ಪತ್ರಗಳನ್ನು ಸಲ್ಲಿಸಿದ್ದೇ ಆದಲ್ಲಿ ಗುತ್ತಿಗೆದಾರರು ಅವುಗಳನ್ನು ಕಾರ್ಯಪಾಲಕ ಇಂಜಿನಿಯರ್‌ರವರ ಹೆಸರಿನಲ್ಲಿ ಒತ್ತೆ ಇಟ್ಟಿರಬೇಕು. ಇ.ಎಂ.ಡಿ. ಯನ್ನು ರಾಷ್ಟ್ರೀಕೃತ ಬ್ಯಾಂಕಿನ ಡಿ.ಡಿ/ಪೇ ಆರ್ಡರ್/ಎಫ್.ಡಿ.ಆರ್. ರೂಪದಲ್ಲಿ ಸಲ್ಲಿಸಿದರೆ, ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಹೆಸರಿನಲ್ಲಿರಬೇಕು. ಇ.ಎಂ.ಡಿ. ಯನ್ನು ಟೆಕ್ನಿಕಲ್ ಬಿಡ್‌ನ ಲಕೋಟೆಯಲ್ಲಿ ಲಗತ್ತಿಸಿರಬೇಕು. ಯಾವುದೇ ಕಾರಣಕ್ಕೂ ಬ್ಯಾಂಕ್ ಗ್ಯಾರಂಟಿ ಪರಿಗಣಿಸುವುದಿಲ್ಲ. ಇ.ಎಂ.ಡಿ. ಮಾನ್ಯತೆ, ಟೆಂಡರ್ ಸ್ವೀಕರಿಸಿದ ದಿನಾಂಕದಿಂದ 180 ದಿನಗಳ ಅವಧಿಗೆ ಹೊಂದಿರಬೇಕು.

**ಲಕೋಟೆ 1 ರಲ್ಲಿ ಒದಗಿಸಬೇಕಾದ ವಿವರಗಳು:**

1. ಇ.ಎಂ.ಡಿ.
2. ಅರ್ಹತಾ ಷರತ್ತಿನ ಸಂಖ್ಯೆ 2 ಮತ್ತು 3 ರಲ್ಲಿ ತಿಳಿಸಿರುವಂತೆ ಟೆಂಡರ್ ಪಡೆಯಲು ಅರ್ಹತೆಗಳ ವಿವರಗಳು.
3. 1ನೇ ಲಕೋಟೆಯಲ್ಲಿರುವ ನಮೂನೆಗಳೆಲ್ಲವನ್ನು ಪೂರ್ಣ ರೀತಿಯಲ್ಲಿ ಭರ್ತಿ ಮಾಡಿ ದೃಢೀಕರಿಸಬೇಕು.

**ಇ.ಎಂ.ಡಿ. ರಹಿತ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.**

**ಲಕೋಟೆ 2 ರಲ್ಲಿ ಒದಗಿಸಬೇಕಾದ ವಿವರಗಳು:–**

1. ಶೆಡ್ಯೂಲ್–ಬಿ ಯನ್ನು ದ್ವಿ–ಪ್ರತಿಯಲ್ಲಿ ಅಂಕಿ ಮತ್ತು ಅಕ್ಷರಗಳಲ್ಲಿ ದರಗಳನ್ನು ಹಾಗೂ ಈ ದರಗಳನ್ನು ಟೆಂಡರ್ ಪರಿಮಾಣದೊಂದಿಗೆ ಗುಣಿಸಿದಲ್ಲಿ ಒದಗುವ ಮೊತ್ತವನ್ನು ನಮೂದಿಸಿದಂತೆ ಸಲ್ಲಿಸಬೇಕು. ಯಾವುದೇ ತಿದ್ದುಪಡಿ ಮಾಡಿರುವುದನ್ನು ಗುತ್ತಿಗೆದಾರರು ಸಹಿಯೊಂದಿಗೆ ದೃಢೀಕರಿಸಬೇಕು.

**ಷರತ್ತುಗಳು:–**

1. ಗುತ್ತಿಗೆದಾರರು ಅರ್ಜಿಯೊಂದಿಗೆ ಟೆಂಡರ್ ಫಾರಂ ಶುಲ್ಕವನ್ನು (ಹಿಂದಿರುಗಿಸಲಾರದಂಥದ್ದು) ಪಾವತಿಸತಕ್ಕದ್ದು ಮತ್ತು ಗುತ್ತಿಗೆದಾರರ ನೊಂದಣಿ ಪ್ರಮಾಣ ಪ್ರತಿ ಲಗತ್ತಿಸತಕ್ಕದ್ದು.

2. ಟೆಂಡರ್ ಪಡೆಯಲು ಅರ್ಹತೆಯಾಗಿ ಪ್ರತಿಯೊಬ್ಬ ಗುತ್ತಿಗೆದಾರರು ಕಳೆದ ಐದು ವರ್ಷಗಳಲ್ಲಿ.....
   ಅ. ಕನಿಷ್ಠ ಎರಡು ಆರ್ಥಿಕ ವರ್ಷಗಳಲ್ಲಿ ಟೆಂಡರ್‌ಗಿಡಲಾದ ಅಂದಾಜು ಮೊತ್ತದ ರೂ.245.00 ಲಕ್ಷ ರಷ್ಟಕ್ಕೆ ಕಡಿಮೆ ಇಲ್ಲದಂತೆ (ಎಲ್ಲಾ ತರಹದ ಸಿವಿಲ್ ಕಾಮಗಾರಿಗಳ ನಿರ್ಮಾಣ) ವಾರ್ಷಿಕ ವಹಿವಾಟು ಮಾಡಿರಬೇಕು.
   ಆ. ಪ್ರಮುಖ ಗುತ್ತಿಗೆದಾರನಾಗಿ ಇದೇ ತರಹನಾದ ರೂ. 121.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಕನಿಷ್ಠ ಒಂದು ಕಾಮಗಾರಿಯನ್ನು ತೃಪ್ತಿಕರವಾಗಿ ಮುಗಿಸಿರಬೇಕು.
   ಇ. ಯಾವುದೇ ಒಂದು ವರ್ಷದಲ್ಲಿ ಈ ಕೆಳಗೆ ಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.

| | | |
|---|---|---|
| 1. | ಅಗೆತದ ಕೆಲಸ | 5000 ಘಮೀ |
| 2. | ಸರಳು ಸಹಿತ ಮತ್ತು ಸರಳುರಹಿತ ಕಾಂಕ್ರೀಟ್ ಕೆಲಸ | 600 ಘಮೀ |
| 3. | ರೈಸಿಂಗ್ ಮೈನ್ ಕಾಮಗಾರಿ ಪಿ.ಎಸ್.ಪಿ. ಪೈಪುಗಳನ್ನು ಒಳಗೊಂಡಂತೆ (450 ಮಿಮೀ ಡಯಾ) | 1000 ಮೀ |
| 4. | ಪಂಪಿಂಗ್ ಮೆಷಿನರಿ, ಪೂರೈಸುವುದು ಮತ್ತು ಅಳವಡಿಸುವುದು ಮತ್ತು ಎಲ್ಲಾ ಎಲೆಕ್ಟ್ರಿಕಲ್ ಕೆಲಸಗಳನ್ನು ಒಳಗೊಂಡಂತೆ | 40 ಹೆಚ್.ಪಿ |

3. ಅರ್ಜಿದಾರರು ಪ್ರದರ್ಶಿಸಬೇಕಾಗಿರುವುದು.
   ಅ) ಮುಖ್ಯವಾಗಿ ಹಾಗೂ ಮಹತ್ವವಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು ಹೊಂದಿರಬೇಕು (50% ಸ್ವಂತ ಇರಬೇಕು), ಬಾಕಿ ಲೀಸ್ ಆಗಿದ್ದಲ್ಲಿ ಜಿ.ಪಿ.ಎ ಹಾಗೂ ಮೂಲ ದಾಖಲಾತಿ ಒದಗಿಸಬೇಕು.

| | | |
|---|---|---|
| ✓ | ಎಕ್ಸ್‌ಕವೇಟರ್/ಪೋಕ್ಲೇನ್ (0.90 ಘ.ಮೀ. ಸಾಮರ್ಥ್ಯ) | 1 ಸಂ. |
| ✓ | ಲಾರಿಗಳು/ಟಿಪ್ಪರ್‌ಗಳು | 2 ಸಂ. |
| ✓ | ಕಂಪ್ರೆಸ್ಸರ್/ವ್ಯಾಗನ್ ಡ್ರಿಲರ್ | 1 ಸಂ. |
| ✓ | ಕಾಂಕ್ರೀಟ್ ಮೆಷಿನ್ ಮಿಕ್ಸರ್ (10/7 ಘ.ಅ ಸಾಮರ್ಥ್ಯ) | 3 ಸಂ. |
| ✓ | ವೈಬ್ರೇಟರ್ | 4 ಸಂ. |
| ✓ | ಪಂಪ್ ಸೆಟ್ (5 ಹೆಚ್.ಪಿ) | 2 ಸಂ. |
| ✓ | ಪಂಪ್ ಸೆಟ್ (10 ಹೆಚ್.ಪಿ) | 2 ಸಂ. |
| ✓ | ಸೆಂಟ್ರಿಂಗ್ ಸಾಮಗ್ರಿಗಳು (ಕಾಂಕ್ರೀಟ್ ಕೆಲಸಕ್ಕೆ) | 100 ಘ.ಮೀ. ಪ್ರತಿ ದಿನಕ್ಕೆ |
| ✓ | ಟ್ರೈಪಾಡ್‌ನೊಂದಿಗೆ ಇರುವ ಕ್ರೇನ್ | 1 ಸಂ. |

   ಆ) ಇಂತಹದೇ ಯೋಜನೆ ನಿರ್ಮಾಣದ ಕನಿಷ್ಠ 5 ವರ್ಷ ಅನುಭವವುಳ್ಳ ಒಬ್ಬ ಸಿವಿಲ್ ಇಂಜಿನಿಯರಿಂಗ್ ಪದವಿ ಹೊಂದಿದ ಪ್ರಾಜೆಕ್ಟ್ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ತಾಂತ್ರಿಕ ಪರಿಣಿತರನ್ನು ಹೊಂದಿರಬೇಕು. ಪಂಪಿಂಗ್ ಮೆಷಿನರಿ ಕೆಲಸವನ್ನು ಅನುಭವವುಳ್ಳ ಪರಿಣಿತ ಎಲೆಕ್ಟ್ರಿಕಲ್ ಗುತ್ತಿಗೆದಾರರಿಂದ ಮಾಡಿಸಬೇಕು.
   ಇ) ಈ ಯೋಜನೆಗೆ ಬೇಕಾದ ಸಂಪನ್ಮೂಲ ಚರಾಸ್ಥಿ ಮತ್ತು / ಅಥವಾ ಬ್ಯಾಂಕ್ ಕ್ರೆಡಿಟ್ ರೂಪದಲ್ಲಿ ಕನಿಷ್ಠ ರೂ.75.00 ಲಕ್ಷಗಳ ಲಭ್ಯತೆ ಬಗ್ಗೆ ಪ್ರಮಾಣ ಪತ್ರ (ಕ್ರೆಡಿಟ್ ಲೈನ್ಸ್/ಅನುದಾನ ಪ್ರಮಾಣ ಪತ್ರ ಬ್ಯಾಂಕಿನಿಂದ ಪ್ರಮಾಣೀಕರಿಸಿದ್ದು).

4. ಕಾಮಗಾರಿಗೆ ಅವಶ್ಯವಿರುವ ಎಲ್ಲಾ ಸಾಮಗ್ರಿಗಳನ್ನು ಗುತ್ತಿಗೆದಾರರೇ ಒದಗಿಸತಕ್ಕದ್ದು ಮತ್ತು ಇಲಾಖಾ ವತಿಯಿಂದ ಯಾವುದೇ ಸಾಮಗ್ರಿಗಳನ್ನು ನೀಡಲಾಗುವುದಿಲ್ಲ. ಗುತ್ತಿಗೆದಾರರು ಭಾರತೀಯ ಮಾನಕ ಸಂಸ್ಥೆಯ ಗುಣಮಟ್ಟದ ಸಾಮಗ್ರಿಗಳನ್ನು ಉಪಯೋಗಿಸಬೇಕು. ಸಾಮಗ್ರಿಗಳ ಗುಣಮಟ್ಟವನ್ನು ಸಕ್ಷಮ ಗುಣನಿಯಂತ್ರಣ ಪ್ರಾಧಿಕಾರದವರಿಂದ ಪರೀಕ್ಷೆ ಮಾಡಿಸಿ ಗುಣಮಟ್ಟದ ಬಗ್ಗೆ ಪ್ರಮಾಣ ಪತ್ರ ಒದಗಿಸತಕ್ಕದ್ದು.
5. ಖಾಲಿ ಟೆಂಡರ್ ಫಾರಂ ವಿತರಿಸುವಾಗ ಗುತ್ತಿಗೆದಾರರ ನೋಂದಣಿ ಪುಸ್ತಕವನ್ನು ಕಡ್ಡಾಯವಾಗಿ ಹಾಜರುಪಡಿಸಿ ಅದರಲ್ಲಿ ಕಾಮಗಾರಿಗಳ ವಿವರಗಳನ್ನು ದಾಖಲಿಸತಕ್ಕದ್ದು.
6. ಸತತವಾಗಿ ಮೂರು ಬಾರಿ ಟೆಂಡರ್ ಫಾರಂ ಖರೀದಿಸಿ ಟೆಂಡರ್ ಹಾಕದೇ ಇರುವ ಗುತ್ತಿಗೆದಾರರು ಟೆಂಡರ್ ಫಾರಂಗಾಗಿ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ.
7. ಕಾಮಗಾರಿಯನ್ನು ಉಪ–ಗುತ್ತಿಗೆ ನೀಡುವುದನ್ನು ನಿಷೇಧಿಸಲಾಗಿದೆ.
8. ಈ ವಿಭಾಗದಲ್ಲಿ ಹಿಂದೆ ನಿಗದಿತ ಸಮಯದೊಳಗೆ ಕಾಮಗಾರಿಯನ್ನು ಪೂರ್ಣಗೊಳಿಸಿದ ಗುತ್ತಿಗೆದಾರರಿಂದ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.

9. ಗುತ್ತಿಗೆದಾರರು ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳನ್ನು ನೋಟರಿ ಅಥವಾ ಪತ್ರಾಂಕಿತ ಅಧಿಕಾರಿಗಳಿಂದ ದೃಢೀಕರಿಸಿದ ದಾಖಲಾತಿ ಪ್ರತಿಗಳನ್ನು ಟೆಂಡರ್‌ನೊಂದಿಗೆ ಲಗತ್ತಿಸತಕ್ಕದ್ದು. ಮೇಲೆ ತಿಳಿಸಿರುವ ಎಲ್ಲಾ ದಾಖಲಾತಿಗಳ ಮೂಲ ಪ್ರತಿಗಳನ್ನು ಗುತ್ತಿಗೆದಾರರು ಟೆಂಡರ್ ತೆರೆಯುವ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು. ಕೆಲಸ ನಿರ್ವಹಿಸಲಾದ ಕುರಿತಾದ ಪ್ರಮಾಣ ಪತ್ರವನ್ನು ಕಾರ್ಯಪಾಲಕ ಇಂಜಿನಿಯರ್ ದರ್ಜೆಗೆ ಕಡಿಮೆ ಇರದ ಅಧಿಕಾರಿಯವರಿಂದ ಪಡೆದಂತೆ ಲಗತ್ತಿಸತಕ್ಕದ್ದು.
10. ರಾಜ್ಯ ಮಾರಾಟ ತೆರಿಗೆಯಲ್ಲಿ ನೋಂದಣಿ ಸೂಚಿಸಿರುವ ಬಗ್ಗೆ ನೋಂದಣಿ ಪ್ರತಿ ಹಾಗೂ ಆದಾಯ ತೆರಿಗೆ ತೀರುವಳಿ ಪತ್ರವನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು.
11. ಷರತ್ತುಗಳನ್ನೊಳಗೊಂಡ ಟೆಂಡರ್‌ನ್ನು ಪರಿಗಣಿಸುವುದಿಲ್ಲ.
12. ಟೆಂಡರ್ ಪ್ರಕಟಣೆಯಲ್ಲಿ ಏನಾದರೂ ತಿದ್ದುಪಡಿಗಳಿದ್ದರೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯ ನೋಟೀಸ್ ಫಲಕದಲ್ಲಿ ಪ್ರಕಟಿಸಲಾಗುವುದು/ತಿಳಿಸಲಾಗುವುದು.
13. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಒಪ್ಪಿಕೊಳ್ಳುವ ಸಕ್ಷಮ ಪ್ರಾಧಿಕಾರ ಕಾಯ್ದಿರಿಸಿಕೊಂಡಿರುತ್ತದೆ ಹಾಗೂ ಅತೀ ಕನಿಷ್ಠ ಟೆಂಡರನ್ನೇ ಒಪ್ಪಿಕೊಳ್ಳಬೇಕಾದ ಅನಿವಾರ್ಯತೆ ಇರುವುದಿಲ್ಲ.
14. ಟೆಂಡರ್ ಮೊತ್ತ/ ಟೆಂಡರ್ ದರಗಳು ಅಂದಾಜಿನ ಮೊತ್ತ/ದರಗಳಿಗಿಂತ ಕಡಿಮೆ ನಮೂದಿಸಲ್ಪಟ್ಟಲ್ಲಿ ಗುತ್ತಿಗೆದಾರರು ಅಂತಹ ಮೊತ್ತ/ದರಗಳಂತೆ ಆಗುವ ಮೊತ್ತಕ್ಕೆ ಸಮನಾದ ಮೊತ್ತಕ್ಕೆ, ಡಿ.ಡಿ/ಎಫ್.ಡಿ.ಆರ್ ರೂಪದಲ್ಲಿ "ಅಡಿಷನಲ್ ಪರ್‌ಫಾರ್ಮೆನ್ಸ್ ಸೆಕ್ಯೂರಿಟಿ" ಯನ್ನು ಟೆಂಡರ್‌ನೊಂದಿಗೆ, ಇ.ಎಂ.ಡಿ. ಗೆ ಹೊರತಾಗಿ ಪ್ರತ್ಯೇಕವಾಗಿ ಸಲ್ಲಿಸತಕ್ಕದ್ದು.

ಹೆಚ್ಚಿನ ವಿವರಗಳಿಗೆ ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ ಇವರ ಕಛೇರಿಯನ್ನು, ಕಛೇರಿ ಕೆಲಸದ ಸಮಯದಲ್ಲಿ ಸಂಪರ್ಕಿಸಬಹುದು.

**ಬಿ.ಹೆಚ್. ಯೋಗೇಶ್**

ಕಾರ್ಯಪಾಲಕ ಇಂಜಿನಿಯರ್, ಸಣ್ಣ ನೀರಾವರಿ ವಿಭಾಗ, ಶಿವಮೊಗ್ಗ.

**WATER RESOURCE DEPARTMENT (Minor Irrigation)**

**Office of the Executive Engineer, Minor Irrigation Division, Shimoga**

**SECTION 1: INVITATION FOR TENDERS (IFT) (RE-TENDER) K/W-1**

**No: EE/MID/SMG/AE-1/TND/LIS/2009-10/1474/IFT No: 01/09-10, Dated; 22nd June 2009**

1. The Executive Engineer, Minor Irrigation Division, Shimoga_invites tenders from eligible tenderers, for the construction of works detailed in the Table below. The tenderers may submit tenders for any or all of the works given in the Table. Two Cover Tender Procedure as per Rule 28 of the KTPP Act shall be followed. The Tenders are required to submit two separate sealed covers, one containing the Earnest money deposit and the details of their capability to undertake the tender (as detailed in ITT Clause 3 and 6), which will be opened only if the Tenderer is found to be qualified to execute the tendered works. The Tenderers are advised to note the minimum qualification criteria specified in Clause 3 of the Instructions to Tenderers to qualify for award of the contract.

2. Tender documents may be purchased from the office of Minor Irrigation from 10.08.2009 to 12.08.2009 for a non-refundable fee (for two sets) as indicated in the Table below in the form of cash or Demand Draft/pay Order on any Nationalized/Scheduled bank payable at Shimoga in favour of The Executive Engineer. Interested tenders may obtain further information at the same address. Tender documents requested by mail will be dispatched by registered/speed post on payment of an extra amount of Rs.200 The Executive Engineer, will not be held responsible for the postal delay if any in the delivery of the documents or non-receipt of the same.

3. Tenders must be accompanied by earnest money deposit specified for the work in the Table below. Earnest money deposit will have to be in any one of the forms as specified in the Tender document and shall have to be valid for 45 days beyond the validity of the tender.

4. Tenders must be delivered to The Executive Engineer, Minor Irrigation Division, Shimoga_ On or before 16 hours on 20.08.2009 (date) and First Cover tenders will be opened if possible on the same day at 17 hours in the presence of the Tenderers who wish to atted. If the office happens to be closed on

the date of receipt of the tenders as specified, the tenders will be received and opened on the next working day at the same time and venue.

5. A Pre-tender meeting will be held on 17.08.2009 at 15 hours at the office of.......to clarify the issues if any, and to answer questions on any matter that may be raised at that stage as stated in clause 8.2 of 'Instructions to Tenderers' of the tender document.

6. Other details can be seen in the tender documents.

**TABLE**

| Package No. | Name of Work | Approximate value of work (Rs.in lakhs) | Earnest Money Deposit (Rs.) | Cost of Document (Rs.) | Period of completion |
|---|---|---|---|---|---|
| 1 | Providing Lift Irrigation Scheme from Tunga River near Mahishi & Heddur in Thirthahalli Taluk Shimoga District | 152.50 | 3,04,000/- | 20,000.00 | 15Months |

**MODE OF APPLICATION SUBMISSION:-**

The contractors while applying for blank tender forms, the following certificates to be submitted along with application after getting verified with original certificates.

1. Contractors Registration Certificate copy.
2. Recent Income Tax Clearance Certificate copy.
3. Recent Sales Tax Clearance Certificate copy.
4. The Contractors satisfying qualifying conditions No 2 and 3 need only apply.

**MODE OF PAYMENT FOR BLANK TENDER FORM:**

If payment is by Demand Draft (DD) or Bankers cheque drawn in favour of the "Executive Engineer, Minor Irrigation Division, Shimoga" on any Schedule Bank payable at Shimoga.

**MODE OF PAYMENT OF E.M.D:-**

The Contractor should submit the Earnest Money Deposit (E.M.D.) along with cover 1 in the form of Demand Draft/Pay Order /FDR/ National Savings Certificate duly pledged in the Name of the Executive Engineer, M.I. Division, Shimoga. The Bank guarantee will not be considered. The validity of E.M.D. shall be for a period of 180 days (One Hundred eighty) from the date of opening of Tender.

**DOCUMENT TO BE FURNISHED ALONG WITH COVER-1:-**

1. E.M.D.
2. Certificate regarding qualifying for tendering as mentioned in condition No 2 and 3.
3. Forms enclosed in the Cover 1 should be completely filled and certified.

**CONDITIONS:-**

1) The Contractor should remit the cost of tender form (not refundable) along with the application and should enclose the Contractor's registration copy.
2) To qualify for award of the Contract, each tenderer in his name should have in the last five years
   - i Achieved in at least two financial years, a minimum annual financial turnover (in all classes of civil engineering constructions works only) of Rs.245.00 lakhs.
   - ii Satisfactorily completed as a prime contractor, at least one similar work of value not less than Rs.121.00 lakhs.
   - iii Executed in any one year, the following minimum quantities of work
     - A. Excavation - 5000 Cum
     - B. Cement Concrete with or without reinforcement - 600 Cum
     - C. Raising Main PSC pipes (Greater than 450mm dia) - 1000 Mtrs

| | | | |
|---|---|---|---|
| D. | Pumping Machinery, Supply & installation including all electric works | - | 40 hp |

3. The applicant demonstrate

a. Availability (50% owned) of the following key and critical equipments for the work.

| | | | |
|---|---|---|---|
| 1. | Excavator / Poclane | - | 1 Nos |
| 2. | Lorries / Tippers | - | 2 Nos |
| 3. | Compressor / Vagon Driller | - | 1 No |
| 4. | Concrete machine mixer (10/7 Cft capacity) | - | 3 Nos |
| 5. | Vibrator | - | 4 Nos |
| 6. | Pumpset (5 H.P.) | - | 2 Nos |
| 7. | Pumpset (10.H.P.) | - | 2 Nos |
| 8. | Centering Materials (Concrete Works) | - | 100 Cum/day |
| 9. | Crane with Tripad | - | 1 No |

b. Availability for this work of a Project Manager with not less than five years experience in construction of similar Civil Engineering works and other graduate engineers with adequate experience as required. Pumping machinery work shall be got executed from experienced electrical contractors. Machinery work has to be got done from experienced persons.

c. Liquid assets and / or availability of credit facilities of not less than Rs.75.00 lakh (Credit lines/letter of credit/certified from Banks for meeting the funds requirements etc.,

4) The Contractor has to make his own arrangements for procurement of all materials required for the work. There is no Departmental Supply of materials. Contractor should procure only ISI mark materials and obtain necessary Quality Control Certificates from the authorized Quality Control Authority.

5) The Contractor should produce Contractor's Registration Book at the time of Issues of Blank tender forms and necessary entries have to be obtained.

6) The Contractor is not eligible for submission of application for tender form if he has not put the tender after purchase of tender document continuously for three times.

7) Sub-leasing of work is prohibited.

8) Application of the contractors who have not completed the works in time in this division will not be considered.

9) The Contractor should enclose all the above documents certified by the Notary or Gazetted Officer along with the Cover 1. The original documents of above mentioned documents should be produced at the time of opening of Tender.

10) The contractor should submit the Income Tax Registration Certificate and Clearance Certificate of Income Tax and Sales Tax of previous year from the concerned department.

11) Conditional tender will not be considered.

12) Any Corrigendum or modification will be notified in the notice board in the office of the Executive Engineer, M.I. Division, Shimoga.

13) The department reserves the right to accept or rejects any of the tender without assigning any reason.

14) If amount quoted is less than the estimated cost then the difference in amount should be remitted in the form of D.D. N.S.C & F.D.R along with the tender.

For any other information the Executive Engineer, M.I. Division, Shimoga may be contacted at office hours.

P.R. 545

Executive Engineer M.I. Division, Shimoga.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಅಧಿಸೂಚನೆ

**ಸಂಖ್ಯೆಃ ಸಿಆಸುಇ 171 ಡಿಇವಿ 2009, ಬೆಂಗಳೂರು, ದಿನಾಂಕಃ 22ನೇ ಜುಲೈ 2009**

1) ವಿಧಾನಸೌಧದ ಹೊರ ಆವರಣದಲ್ಲಿ ಉತ್ತರ ದಿಕ್ಕಿನಲ್ಲಿರುವ ಗ್ಯಾರೇಜ್ ಸಂಖ್ಯೆ: 16 ರಿಂದ 30ರವರೆಗಿನ ಪ್ರದೇಶದಲ್ಲಿ ಸೈಕಲ್, ಮೋಟಾರ್ ಸೈಕಲ್, ಸ್ಕೂಟರ್ ಹಾಗೂ ಕಾರು ಸ್ಟ್ಯಾಂಡನ್ನು ಗುತ್ತಿಗೆ ಆಧಾರದ ಮೇಲೆ ನಡೆಸಲು ಅನುಭವಸ್ಥ ಗುತ್ತಿಗೆದಾರರಿಂದ ಮೊಹರು ಮಾಡಲ್ಪಟ್ಟ ಟೆಂಡರುಗಳನ್ನು ಕರೆಯಲಾಗಿದೆ.

2) ಟೆಂಡರ್ ಕವರಿನ ಮೇಲೆ "ವಿಧಾನಸೌಧದ ಹೊರ ಆವರಣದಲ್ಲಿ ಸ್ಕೂಟರ್ ಹಾಗೂ ಕಾರ್ ಸ್ಟ್ಯಾಂಡಿನ ಗುತ್ತಿಗೆ ಬಗ್ಗೆ" ಎಂದು ಬರೆದಿರತಕ್ಕದ್ದು ಹಾಗೂ ರೂ.5,000-00 ಇ.ಎಮ್.ಡಿ. ಮೊತ್ತಕ್ಕೆ ಡಿಮ್ಯಾಂಡ್ ಡ್ರಾಫ್ಟ್‌ನ್ನು "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಲೆಕ್ಕಪತ್ರ)", ಇವರ ಹೆಸರಿಗೆ ಬರೆದು, "ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಕಾರ್ಯಕಾರಿ), ಕೊಠಡಿ ಸಂಖ್ಯೆಃ 23, ವಿಧಾನಸೌಧ, ಬೆಂಗಳೂರು" ಇವರ ಹೆಸರಿಗೆ ಕಳುಹಿಸತಕ್ಕದ್ದು. ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.

3) ಟೆಂಡರ್ ಸಲ್ಲಿಸಲು ಕೊನೆಯ ದಿನಾಂಕಃ 23-07-2009ರ ಮಧ್ಯಾಹ್ನ 3-00 ಗಂಟೆಯವರೆಗೆ.

4) ಟೆಂಡರ್‌ನ್ನು ದಿನಾಂಕಃ 24-07-2009ರ ಮಧ್ಯಾಹ್ನ 4-00 ಗಂಟೆಗೆ ಸರ್ಕಾರದ ಉಪ ಕಾರ್ಯದರ್ಶಿ, ಸಿಆಸುಇ (ಕಾರ್ಯಕಾರಿ), ಕೊಠಡಿ ಸಂಖ್ಯೆಃ 23, ಇಲ್ಲಿ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾಗಿದ್ದಲ್ಲಿ, ಟೆಂಡರ್‌ನ್ನು ನಂತರದ ಕಚೇರಿ ದಿನದಂದು ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

5) ಟೆಂಡರ್ ಸಲ್ಲಿಸುವವರು ಒಂದು ವರ್ಷದ ಗುತ್ತಿಗೆ ಹಣವನ್ನು ನಮೂದಿಸತಕ್ಕದ್ದು ಮತ್ತು ಈ ಮೊತ್ತವು ರೂ.50,000/-ಕ್ಕಿಂತ (ರೂಪಾಯಿ ಐವತ್ತು ಸಾವಿರ ಮಾತ್ರ) ಕಡಿಮೆ ಇರಕೂಡದು.

6) ಯಶಸ್ವಿ ಟೆಂಡರ್‌ದಾರರು ಸೂಚಿಸುವ ಒಂದು ವರ್ಷದ ಟೆಂಡರ್ ಹಣವನ್ನು ಒಂದೇ ಕಂತಿನಲ್ಲಿ ಸರ್ಕಾರಕ್ಕೆ ಪಾವತಿ ಮಾಡತಕ್ಕದ್ದು. ಟೆಂಡರ್ ಹಣವನ್ನು ಆಯವ್ಯಯ ಲೆಕ್ಕ ಶೀರ್ಷಿಕೆ "0070-ಇತರ ಆಡಳಿತಾತ್ಮಕ ಸೇವೆಗಳು-ಸಿ-60-ಇತರ ಸೇವೆಗಳು-800-ಇತರ ಸ್ವೀಕೃತಿಗಳು-03-ಸಾಮಾನ್ಯ ಆಡಳಿತ ಸ್ವೀಕೃತಿಗಳು" ಗೆ ಪಾವತಿ ಮಾಡತಕ್ಕದ್ದು.

7) ಯಶಸ್ವಿ ಟೆಂಡರ್‌ದಾರರು ಪಾವತಿ ಮಾಡಿರುವ ಇ.ಎಂ.ಡಿ. ಮೊತ್ತವನ್ನು ಗುತ್ತಿಗೆ ಷರತ್ತುಗಳನ್ನು ನಿಭಾಯಿಸುವ ಸಲುವಾಗಿ 'ಸೆಕ್ಯೂರಿಟಿ ಡಿಪಾಸಿಟ್' ಆಗಿ ಪರಿಗಣಿಸಲಾಗುವುದು. ಅಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮೊತ್ತವನ್ನು ಅವರು ಕೋರಿಕೆ ಸಲ್ಲಿಸಿದ ನಂತರ ಬಡ್ಡಿರಹಿತವಾಗಿ ಮರು ಪಾವತಿ ಮಾಡಲಾಗುವುದು.

8) ಯಾವುದಾದರೊಂದು ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸಲು ಅಥವಾ ಯಾವುದಾದರೊಂದು ಟೆಂಡರ್‌ನ್ನು ಒಪ್ಪಿಕೊಳ್ಳಲು ಸರ್ಕಾರಕ್ಕೆ ಪೂರ್ಣ ಹಕ್ಕಿದೆ.

9) ಈ ಗುತ್ತಿಗೆಯು ಈ ಕೆಳಗೆ ಕಾಣಿಸಿರುವ ನಿಬಂಧನೆಗಳಿಗೆ ಒಳಪಟ್ಟಿದೆ:-

1. ಈ ಗುತ್ತಿಗೆಯು ದಿನಾಂಕಃ1-8-2009ರಿಂದ ಒಂದು ವರ್ಷದ ಅವಧಿಗೆ ಇರುತ್ತದೆ.
2. ಗುತ್ತಿಗೆದಾರರು, ಸ್ಕೂಟರ್ ಮತ್ತು ಕಾರ್ ಸ್ಟ್ಯಾಂಡ್‌ನ್ನು ಬೆಳಿಗ್ಗೆ 8-00 ಗಂಟೆಯಿಂದ ರಾತ್ರಿ 8-00 ಗಂಟೆಯವರೆಗೆ(ರಜಾ ದಿನಗಳನ್ನು ಹೊರತುಪಡಿಸಿ) ಎಲ್ಲಾ ದಿನಗಳಲ್ಲೂ ನಡೆಸತಕ್ಕದ್ದು. ಸದರಿ ಆವರಣವನ್ನು ಗುತ್ತಿಗೆದಾರರು ಸ್ವಚ್ಛವಾಗಿ ಇಡತಕ್ಕದ್ದು.
3. ಕರ್ನಾಟಕ ಸರ್ಕಾರ ಸಚಿವಾಲಯ/ವಿಧಾನಸಭೆ/ವಿಧಾನ ಪರಿಷತ್ತು ಸಚಿವಾಲಯದ ಅಧಿಕಾರಿ /ನೌಕರರಿಂದ ಸೈಕಲ್ ಒಂದಕ್ಕೆ ತಿಂಗಳೊಂದಕ್ಕೆ ರೂ.5-00 ಹಾಗೂ ಮೋಟಾರ್ ಸೈಕಲ್, ಸ್ಕೂಟರ್, ಮೊಪೆಡ್‌ಗಳಿಗೆ ತಿಂಗಳೊಂದಕ್ಕೆ ರೂ.15–00ರಂತೆ ಮತ್ತು ಕಾರುಗಳಿಗೆ ತಿಂಗಳೊಂದಕ್ಕೆ ರೂ.25-00 ರಂತೆ ಶುಲ್ಕವನ್ನು ಗುತ್ತಿಗೆದಾರರು ವಸೂಲಿ ಮಾಡುವುದು. ಇತರರಿಂದ ಒಂದು ದಿನಕ್ಕೆ ಸೈಕಲ್‌ಗೆ ರೂ.1-00 ರಂತೆ, ಮೋಟಾರ್ ಸೈಕಲ್, ಸ್ಕೂಟರ್, ಮೊಪೆಡ್‌ಗಳಿಗೆ ರೂ.3-00 ರಂತೆ ಮತ್ತು ಕಾರುಗಳಿಗೆ ರೂ.5-00 ರಂತೆ ಶುಲ್ಕವನ್ನು ವಸೂಲಿ ಮಾಡತಕ್ಕದ್ದು.
4. ಈ ನಿಲ್ದಾಣಗಳಲ್ಲಿ ನಿಲ್ಲಿಸಲಾಗುವ ವಾಹನಗಳಿಗೆ ಗುತ್ತಿಗೆದಾರರು ಟೋಕನ್‌ಗಳನ್ನು ನೀಡತಕ್ಕದ್ದು.
5. ಈ ಮೇಲ್ಕಾಣಿಸಿರುವ ನಿಲ್ದಾಣದಲ್ಲಿ ನಿಲ್ಲಿಸುವ ವಾಹನಗಳಿಗೆ ವಾಹನ ಮಾಲೀಕರಿಂದ ಮೇಲಿನಂತೆ ನಿಗದಿಪಡಿಸಿದ ಶುಲ್ಕವನ್ನು ಮಾತ್ರ ವಸೂಲಿ ಮಾಡತಕ್ಕದ್ದು.
6. ಸರ್ಕಾರಿ ವಾಹನಗಳಿಗೆ ಗುತ್ತಿಗೆದಾರರು ಶುಲ್ಕವನ್ನು ವಸೂಲಿ ಮಾಡಬಾರದು.
7. ಈ ನಿಲ್ದಾಣಗಳಲ್ಲಿ ನಿಗದಿತ ವೇಳೆಯಲ್ಲಿ ಶುಲ್ಕ ಪಾವತಿ ಮಾಡಿ ನಿಲ್ಲಿಸಿರುವ ವಾಹನಗಳ ಭದ್ರತೆಯ ಪೂರ್ಣ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ. ಈ ಸ್ಟ್ಯಾಂಡಿನಲ್ಲಿ ವಾಹನಗಳನ್ನು ನಿಲ್ಲಿಸಿದ ಅವಧಿಯಲ್ಲಿ ವಾಹನಗಳಿಗೆ ಯಾವುದೇ ನಷ್ಟ ಅಥವಾ ಹಾನಿ ಉಂಟಾದಲ್ಲಿ ಗುತ್ತಿಗೆದಾರರು ಇದಕ್ಕೆ ಪರಿಹಾರವನ್ನು ನೀಡಲು ಬದ್ಧರಾಗಿರುತ್ತಾರೆ.

8. ಸೈಕಲ್, ಸ್ಕೂಟರ್ ಮತ್ತು ಕಾರ್ ನಿಲ್ದಾಣಗಳಲ್ಲಿ ನಿಲ್ಲಿಸಿರುವ ವಾಹನಗಳ ಭದ್ರತೆಯ ಪೂರ್ಣ ಜವಾಬ್ದಾರಿ ಗುತ್ತಿಗೆದಾರರದ್ದಾಗಿರುತ್ತದೆ.
9. ಈ ನಿಲ್ದಾಣಗಳಲ್ಲಿ ನಿಗದಿತ ವೇಳೆಯಲ್ಲಿ ಪಾರ್ಕಿಂಗ್ ಟೋಕನ್ ಪಡೆದು ನಿಲ್ಲಿಸಿರುವ ಯಾವುದೇ ವಾಹನವು ಗುತ್ತಿಗೆದಾರರ ನಿರ್ಲಕ್ಷ್ಯತನ ಅಥವಾ ಉಪೇಕ್ಷೆಯಿಂದ ಕಾಣೆಯಾದಲ್ಲಿ ಅಥವಾ ಅದಕ್ಕೆ ಹಾನಿಯಾದಲ್ಲಿ, ಗುತ್ತಿಗೆದಾರರೇ ವಾಹನದ ಮಾಲೀಕರಿಗೆ ಪರಿಹಾರ ಕೊಡುವ ವಿಷಯದಲ್ಲಿ ಸರ್ಕಾರದ ಮುಖ್ಯ ಕಾರ್ಯದರ್ಶಿಗಳು ಕೊಡುವ ನಿರ್ಣಯವು ಅಂತಿಮವಾಗಿರುತ್ತದೆ. ಗುತ್ತಿಗೆ ಅವಧಿ ಮುಗಿದ ಮೇಲೆ ಗುತ್ತಿಗೆದಾರರಿಂದ ಸರ್ಕಾರಕ್ಕಾಗಲೀ ಅಥವಾ ವಾಹನದ ಮಾಲೀಕರಿಗಾಗಲೀ ಯಾವುದೇ ಬಾಕಿ ಇದ್ದಲ್ಲಿ ಅದನ್ನು ಮುಂಗಡ ಹಣದಿಂದ ಕಳೆದು ಬಾಕಿ ಹಣವನ್ನು ಗುತ್ತಿಗೆದಾರರಿಗೆ ಹಿಂತಿರುಗಿಸಲಾಗುವುದು.
10. ಗುತ್ತಿಗೆಯನ್ನು ಒಪ್ಪಿದ ದಿನಾಂಕದಿಂದ 15 ದಿವಸದೊಳಗೆ ಗುತ್ತಿಗೆದಾರರು ನಿಗದಿತ ಪ್ರಪತ್ರದಲ್ಲಿ ಕರಾರನ್ನು ಸಹಿ ಮಾಡಿ ಸರ್ಕಾರಕ್ಕೆ ಕೊಡತಕ್ಕದ್ದು.
11. ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳ ಉಲ್ಲಂಘನೆಯಾದಲ್ಲಿ ಗುತ್ತಿಗೆಯನ್ನು ರದ್ದುಪಡಿಸಲಾಗುವುದು. ಅಂತಹ ಸಂದರ್ಭದಲ್ಲಿ ಭದ್ರತಾ ಠೇವಣಿಯಾಗಿ ಇಟ್ಟಿರುವ ಮುಂಗಡ ಹಣವನ್ನು ಹಾಗೂ ಮುಂಗಡವಾಗಿ ಪಾವತಿ ಮಾಡಿರುವ ಗುತ್ತಿಗೆ ಶುಲ್ಕವನ್ನು ಮುಟ್ಟುಗೋಲು ಹಾಕಲಾಗುವುದು.
12. ಗುತ್ತಿಗೆದಾರರು, ಗುತ್ತಿಗೆ ನಡೆಸುವ ಸ್ಥಳದಲ್ಲಿ ಸರ್ಕಾರಿ ಸಿಬ್ಬಂದಿ ಮತ್ತು ಸಾರ್ವಜನಿಕರಿಗೆ ನಿಗದಿಪಡಿಸಿರುವ ಶುಲ್ಕದ ವಿವರಗಳನ್ನು ಬೋರ್ಡ್‌ನಲ್ಲಿ ಬರೆಸಿ ಕಡ್ಡಾಯವಾಗಿ ಪ್ರದರ್ಶಿಸತಕ್ಕದ್ದು.
13. ಈ ಸಂಬಂಧ ಯಾವುದೇ ವ್ಯಾಜ್ಯ ಉಂಟಾದಲ್ಲಿ ಅದನ್ನು ಬೆಂಗಳೂರು ನಗರ ಸಿವಿಲ್ ನ್ಯಾಯಾಲಯದಲ್ಲಿ ಮಾತ್ರ ಬಗೆಹರಿಸಿಕೊಳ್ಳತಕ್ಕದ್ದು.

10) ಗುತ್ತಿಗೆಯ ಷರತ್ತು ಮತ್ತು ನಿಬಂಧನೆಗಳನ್ನು ಉಲ್ಲಂಘಿಸಿದಲ್ಲಿ ಮಾತ್ರವಲ್ಲದೆ ಬೇರೆ ಯಾವುದೇ ಕಾರಣಗಳಿಗಾಗಿ ಯಾವುದೇ ಸಮಯದಲ್ಲಿ, ಗುತ್ತಿಗೆದಾರರಿಗೆ 2 ತಿಂಗಳ ಸೂಚನಾ ಪತ್ರ ನೀಡಿ ಗುತ್ತಿಗೆಯನ್ನು ರದ್ದುಪಡಿಸಲು ಸರ್ಕಾರಕ್ಕೆ ಹಕ್ಕಿರುತ್ತದೆ. ಈ ಉಪ ವಾಕ್ಯದಂತೆ ಗುತ್ತಿಗೆಯನ್ನು ರದ್ದುಪಡಿಸಿದಲ್ಲಿ, ಉಳಿದ ಗುತ್ತಿಗೆ ಅವಧಿಗೆ ಸಮ ಪ್ರಮಾಣದ ಗುತ್ತಿಗೆ ಶುಲ್ಕವನ್ನು ಗುತ್ತಿಗೆದಾರರಿಗೆ ಮರಳಿ ಪಡೆಯುವ ಹಕ್ಕಿದೆ.

ಕರ್ನಾಟಕದ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ.ಎಸ್. ಮಂಜುನಾಥ್**

ಪಿ.ಆರ್. 520 ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

## ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ರಾಜ್ಯ ಗುಪ್ತವಾರ್ತೆ, ನಂ.2, ನೃಪತುಂಗ ರಸ್ತೆ, ಬೆಂಗಳೂರು–1

## ಟೆಂಡರ್ ಪ್ರಕಟಣೆ (ದ್ವಿ ಲಕೋಟೆ ಪದ್ಧತಿ)

**ಸಂಖ್ಯೆ : ಸಂಗ್ರಹ :ಆಧುನಿ/04/2009-10, ದಿನಾಂಕ: 29ನೇ ಜೂನ್ 2009**

ಪೊಲೀಸ್ ಇಲಾಖೆಗೆ (ರಾಜ್ಯ ಗುಪ್ತವಾರ್ತೆ, ಬೆಂಗಳೂರು) ಆಧುನೀಕರಣ ಯೋಜನೆಯಲ್ಲಿ ಅಗತ್ಯವಿರುವ Mobile Phone Data Retriever- 01 No. ಅನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು (ಟೆಂಡರ್) "**ದ್ವಿ ಲಕೋಟೆ ಪದ್ಧತಿ**" ಯಲ್ಲಿ ಆಹ್ವಾನಿಸಲಾಗಿದೆ.

**ಸೂಚನೆ:** ಮೇಲಿನ ಉಪಕರಣದ ಉತ್ಪಾದಕರು/ ಉತ್ಪಾದಕ ಘಟಕ / ಉತ್ಪಾದಕ ಘಟಕದ ಅಧಿಕೃತ ಏಜೆಂಟರುದಾರರು, ಪ್ರಖ್ಯಾತ ಕಂಪನಿಯ ಬ್ರಾಂಡ್‌ಗಳಿಗೆ ಆದ್ಯತೆ ನೀಡಲಾಗುವುದು.

1. ವಿವರ ಹಾಗೂ ಷರತ್ತನ್ನು ಒಳಗೊಂಡ ಟೆಂಡರ್ ಅರ್ಜಿಯನ್ನು ತಾಂತ್ರಿಕ ವಿಶಿಷ್ಟತೆಯೊಂದಿಗೆ (Technical Specifications) ದಿನಾಂಕ:20.07.2009 ರಿಂದ 19.08.2009 ರವರೆಗೆ ಕಛೇರಿಯ ಕೆಲಸದ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 5.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಟೆಂಡರ್ ಅರ್ಜಿಯ ಬೆಲೆ ರೂ. 200-00 ಆಗಿದ್ದು, ಇದನ್ನು ಮರು ಪಾವತಿ ಮಾಡಲಾಗುವುದಿಲ್ಲ. ಟೆಂಡರ್ ಅರ್ಜಿಯನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್ ಮೂಲಕ ಪಾವತಿಸಿದರೆ ಅಂಗೀಕರಿಸುವುದಿಲ್ಲ) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯ ಬಯಸುವವರು ರೂ. 200-00 ಗಳಿಗೆ ಡಿ.ಡಿ.ಯನ್ನು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ಬೆಂಗಳೂರು – 1. ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಹಾಗೂ ಸ್ವವಿಳಾಸದೊಂದಿಗೆ ಲಕೋಟೆಯ ಮೇಲೆ ರೂ. 50-00 ಗಳ ಅಂಚೆ ಚೀಟಿಯನ್ನು ಅಂಟಿಸಿ ಕಳುಹಿಸಲು ಕೋರಿದೆ.
2. ಟೆಂಡರ್ ಅರ್ಜಿಯನ್ನು ಮೊಹರು ಮಾಡಿದ ಎರಡು ಪ್ರತ್ಯೇಕ ಕವರುಗಳಲ್ಲಿ ಈ ಕೆಳಕಂಡಂತೆ ಕಳುಹಿಸಬೇಕಾಗಿರುತ್ತದೆ.

ಅ) ಮೊಹರು ಮಾಡಿದ ಒಂದನೇ ಕವರಿನ ಮೇಲ್ಭಾಗದಲ್ಲಿ " M.P.D.R. **ಸರಬರಾಜಿಗಾಗಿ ಇ.ಎಂ.ಡಿ. ಮತ್ತು ಇತರೆ ವಿವರಣೆ**" ಎಂದು ಹಾಗೂ ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

ಆ) ಮೊಹರು ಮಾಡಿದ ಎರಡನೇ ಕವರಿನ ಮೇಲ್ಭಾಗದಲ್ಲಿ " M.P.D.R. **ಸರಬರಾಜು ಬೆಲೆ ಪಟ್ಟಿ**" ಎಂದು ಮತ್ತು ಕವರಿನ ಕೆಳಭಾಗದಲ್ಲಿ ಸರಬರಾಜು ಮಾಡುವ ಸಂಸ್ಥೆಯ ಹೆಸರು ಮತ್ತು ವಿಳಾಸವನ್ನು ನಮೂದಿಸಬೇಕು.

3. **ಮೊದಲನೆ ಕವರ್ (ಟೆಕ್‌ನಿಕಲ್ ಬಿಡ್)** :– ಮೊಹರು ಮಾಡಿದ ಮೊದಲನೆ ಕವರ್ ಈ ಕೆಳಕಂಡ ಮಾಹಿತಿಯನ್ನು ಒಳಗೊಂಡಿರಬೇಕು.

   ಅ) ಸರಬರಾಜು ಮಾಡಲು ಇಚ್ಛಿಸುವ ಸಾಫ್ಟವೇರ್‌ಗೆ ಮುಂಗಡ ಹಣ ಠೇವಣಿ (ಇ.ಎಂ.ಡಿ) ಯ ಬಾಬ್ತು ಪ್ರತ್ಯೇಕವಾಗಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ನಂ. 2, ನೃಪತುಂಗ ರಸ್ತೆ, ಬೆಂಗಳೂರು–1 ರವರ ಹೆಸರಿನಲ್ಲಿ ಡಿಮ್ಯಾಂಡ್ ಡ್ರಾಫ್ಟ್‌ಗಳನ್ನು ಪಡೆಯಬೇಕು. ಇ.ಎಂ.ಡಿ. ಯಲ್ಲಿ ನಮೂದಿಸಲಾದ ಸಾಮಗ್ರಿಯ ಒಟ್ಟು ಬೆಲೆಗೆ ಶೇಕಡ 2% ರಷ್ಟು ಇರಬೇಕು. ಇಲ್ಲದಿದ್ದಲ್ಲಿ ಪರಿಗಣಿಸಲಾಗುವುದಿಲ್ಲ.

   ಆ) ಸರಬರಾಜು ಮಾಡುವ ಸಂಸ್ಥೆಯ ಸಾಮರ್ಥ್ಯದ ಬಗ್ಗೆ ಮಾಹಿತಿ ಮತ್ತು ಸರಬರಾಜು ಮಾಡುವ ಸಾಮಗ್ರಿಗಳನ್ನು ಉತ್ಪಾದಿಸಲಾಗುತ್ತಿದೆಯೇ ಅಥವಾ ಇಲ್ಲವೇ ಎಂಬ ಬಗ್ಗೆ ದಾಖಲಾತಿ.

   ಇ) ಆರ್ಥಿಕ ಸ್ಥಿತಿ ಮತ್ತು ಸಾಮರ್ಥ್ಯದ ಬಗ್ಗೆ.

   ಈ) ಮಾರಾಟ ತೆರಿಗೆ ಮತ್ತು ಅದಾಯ ತೆರಿಗೆ ಬಗ್ಗೆ(ಹಿಂದಿನ ಮೂರು ವರ್ಷಗಳು).

   ಉ) ವಾರ್ಷಿಕ ವಹಿವಾಟು(ಹಿಂದಿನ ಮೂರು ವರ್ಷಗಳ).

   ಋ) ಅನುಭವ ಮತ್ತು ಹಿಂದೆ ಸರಬರಾಜು ಮಾಡಿರುವ ಬಗ್ಗೆ.

4. **ಎರಡನೇ ಕವರ್ (ಕಮರ್ಷಿಯಲ್ ಬಿಡ್):** ಮೊಹರು ಮಾಡಿದ ಎರಡನೇ ಕವರ್ ಟೆಂಡರ್ ಅರ್ಜಿ ಮತ್ತು ಸರಬರಾಜು ಮಾಡುವ ಸಾಮಗ್ರಿಯ ಹೆಸರು ಮತ್ತು ಬೆಲೆ ಪಟ್ಟಿಯನ್ನು ಮಾತ್ರ ಹೊಂದಿರಬೇಕು.
5. ಮೊಹರು ಮಾಡಿದ ಎರಡು ಕವರ್‌ಗಳನ್ನು ಒಂದು ಕವರ್‌ನಲ್ಲಿ ಹಾಕಿ **ಶ್ರೀ. ಬಿ ದಯಾನಂದ, ಐ.ಪಿ.ಎಸ್., ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ರಾಜ್ಯ ಗುಪ್ತವಾರ್ತೆ, ನಂ. 02, ನೃಪತುಂಗ ರಸ್ತೆ, ಬೆಂಗಳೂರು – 01**. ರವರ ಹೆಸರಿಗೆ ದಿನಾಂಕ :19.08.2009 ರ ಸಂಜೆ 5.00 ಗಂಟೆಯೊಳಗೆ ತಲುಪುವಂತೆ ಸಲ್ಲಿಸತಕ್ಕದ್ದು. ತದನಂತರ ಸಲ್ಲಿಸಲಾದ/ಪಡೆದ ಅರ್ಜಿಗಳನ್ನು ಪರಿಗಣಿಸುವುದಿಲ್ಲ.
6. ಟೆಂಡರ್ ಆಹ್ವಾನಿಸಿದ ಅಧಿಕಾರಿಯು ದಿನಾಂಕ : 21.08.2009 ರಂದು ಬೆಳಿಗ್ಗೆ 11.30 ಗಂಟೆಗೆ **ಮೊದಲನೆ ಕವರ್ (ಟೆಕ್‌ನಿಕಲ್ ಬಿಡ್)** ಅನ್ನು ತೆರೆದು, ಸರಬರಾಜು ಸಂಸ್ಥೆಗಳು ಸಲ್ಲಿಸಲಾದ ಮಾಹಿತಿಗಳನ್ನು/ ದಾಖಲಾತಿಗಳನ್ನು ಪರಿಶೀಲಿಸಿ ಸರಬರಾಜು ಮಾಡುವ ಅರ್ಹ ಸಂಸ್ಥೆಗಳ ಪಟ್ಟಿಯನ್ನು ತಯಾರಿಸಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು/ಪ್ರತಿನಿಧಿಗಳು, ಟೆಂಡರ್ ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
7. ಪ್ರತಿ ಸಾಮಗ್ರಿಗಳಿಗೆ ಪ್ರತ್ಯೇಕವಾದ ಇ.ಎಂ.ಡಿ.ಯನ್ನು ಡಿ.ಡಿ. ಮೂಲಕ ಪಾವತಿಸದಿದ್ದರೆ, ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು. ಟೆಂಡರ್‌ದಾರರು ಅಂಚೆ ಮೂಲಕ/ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿಗಳು ಮತ್ತು ದಾಖಲಾತಿಗಳು ವಿಳಂಬವಾಗಿ ತಲುಪಿದಲ್ಲಿ/ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ.
8. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಸಗಟಾಗಿ/ಭಾಗಶಃ ಒಪ್ಪಿಕೊಳ್ಳುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.
9. ಹೆಚ್ಚಿನ ಮಾಹಿತಿಗಾಗಿ www.karnatakastatepolice.org. ವೆಬ್‌ಸೈಟನ್ನು ಸಂಪರ್ಕಿಸಿ.

**ಬಿ. ದಯಾನಂದ, ಐ.ಪಿ.ಎಸ್.**
ಡೆಪ್ಯೂಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಮತ್ತು
ಟೆಂಡರ್ ಆಹ್ವಾನಿಸುವ ಪ್ರಾಧಿಕಾರ, ರಾಜ್ಯ ಗುಪ್ತವಾರ್ತೆ, ಬೆಂಗಳೂರು.

**Office of the Inspector General of Police, State Intelligence, No.02, Nrupathunga Road, Bangalore-01**

**NO.STS/MDR/04/2008-09, Datd: 29th June 2009.**

**TENDER NOTICE (TWO-COVER SYSTEM)**

Sealed tenders are invited in **"Two-cover system"** for the supply of Mobile Phone Data Retriever - 01 No. to the Police Department under Modernisation Scheme (State Intelligence, Bangalore).

**NOTE:** Preference will be given to manufacturing unit/reputed agent and Reputed brands available in the market.

1. Tender forms containing detailed terms and conditions and technical specification of the Equipments can be obtained from this Office between 10.00 am to 5.00 pm on any working days from 20/07/2009 to 19/08/2009. Separate Tender forms should be submitted for each item, otherwise it will not be considered. The cost of each tender form is Rs.200/- (Rupees two hundred only) payable in the form of Cash or D.D. which is non refundable (money order will not be accepted). The Tenderer who desires to obtain tender form by post may send D.D for Rs.200/- drawn in favour of Inspector General of Police, State Intelligence, No.02 Nrupathunga Road, Bangalore-01 along with self addressed envelope affixing stamp of Rs.50/-.

2. Tender should be submitted in **two separate sealed Covers** duly superscribed as below.

a) The **1st sealed cover** should be superscribed on the top as "**EMD and other details for the supply of Mobile Phone Data Retriever"** and address of the firms should be superscribed below.

b) **The 2nd sealed cover** should be superscribed as "**Price quotations for the supply of Mobile Phone Data Retriever "** and address of the firm should be mentioned below.

**3. FIRST SEALED COVER (Technical bid)**: The First sealed cover should contain the following information about the tenderer namely: -

a) Demand Draft drawn in favour of Inspector General of Police, State Intelligence, No.02 Nrupathunga Road, and Bangalore-01, towards E.M.D. The E.M.D. should be equivalent to 2% value of total rate quoted by the tenderer. E.M.D should be submitted, otherwise it will not be considered.

b) Capabilities with respect to personnel, equipment and manufacturing facilities.

c) Financial status and capacity.

d) Sales tax and Income tax details of preceding 3 years.

e) Annual turn over details of preceding 3 years.

f) Experience and past performance in the execution of similar contracts.

4. The **SECOND SEALED COVER (Commercial Bid**): should contain tender applications along with price only.

5. As mentioned above, the two sealed covers should be addressed to **Sri. B Dayananda, I.P.S., Deputy Inspector General of Police, State Intelligence, No.02, Nrupathunga Road, Bangalore-01, and should be submitted on or before 5-00 P.M. on 19.08.2009.** Tender applications received after the due date will not be considered.

6. **The Tender Inviting Authority will open the first cover (Technical bid) on 21.08.2009 at 11.30 A.M** and evaluate the tenderer's capacity on the basis of criteria specified in the tender document and on this basis will prepare a list of qualified tenderers. Interested tenderers / representatives will be allowed to be present during the opening of tenders.

7.The tenders received without Earnest Money Deposit (E.M.D.) in the form of Demand Draft shall run the risk of rejection. The Department will not be responsible for any delay, loss, damage, or non-receipt of request/tender documents/tender sent by posts/courier etc.

**8.** Department has reserved the right to accept /reject/split any or all tenders without assigning any reasons.

9.For more detail Visit us at www.karnatakastatepolice.org.

**B. Dayananda. I.P.S**
Deputy Inspector General of Police,
State Intelligence & Tender Inviting Authority.

P.R. 544

**ಲೋಕೋಪಯೋಗಿ ಇಲಾಖೆ (ರಾಷ್ಟ್ರೀಯ ಹೆದ್ದಾರಿಗಳು)**
**ಕಾರ್ಯನಿರ್ವಾಹಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ, ನಿರ್ಮಾಣ ಭವನ, ಕೆ.ಎಸ್.ಸಿ.ಸಿ ಕಟ್ಟಡ 2ನೇ ಮಹಡಿ, ಡಾ:ರಾಜ್‌ಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು–10**
**ಟೆಂಡರ್ ಪ್ರಕಟಣೆ ನಂ.03/2009–10 (ದ್ವಿ ಪ್ರತಿ ಟೆಂಡರ್)**
**ಸಂ:ಕಾ.ಇ.ರಾ.ಹೆ.ವಿ.ವಿ:ಎಇ:ಎನ್.ಐ.ಟಿ.–03:2008–09, ದಿನಾಂಕ: 23ನೇ ಜೂನ್ 2009**

ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಕಾಯಿದೆ 2000ರ ಅಡಿಯಲ್ಲಿನ ಪಾರದರ್ಶಕತೆಯ ಅನುಗುಣವಾಗಿ ಈ ಮುಂದೆ ತಿಳಿಸಿರುವ ಕಾಮಗಾರಿಗಳಿಗೆ ಏಕ ಲಕೋಟೆ ಬಿಡ್ ವಿಧಾನದಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ದ್ವಿಪ್ರತಿಯಲ್ಲಿ ಕೆ.ಪಿ.ಡ.ಬ್ಲ್ಯೂಡಿ/ಎಂ.ಒಆರ್. ಎಸ್.ಟಿ. ಮತ್ತು ಹೆಚ್ ಮನ್ನಣೆ ಮಾಡಿದ ಸಂಸ್ಥೆಗಳಲ್ಲಿ ನೊಂದಾಯಿತ ದರ್ಜೆ–I ಗುತ್ತಿಗೆದಾರರಿಂದ ಮೊಹರು ಮಾಡಿದ ಬಾಬ್ತುವಾರು ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಕಾಯಿದೆ 2000ಕ್ಕೆ ಅನುಗುಣವಾಗಿ ಮತ್ತು ಸ್ಟ್ಯಾಂಡರ್ಡ್ ಬಿಡ್ಡಿಂಗ್ ಡಾಕ್ಯುಮೆಂಟ್ ಆಫ್ ಎಂ.ಒಆರ್. ಎಸ್.ಟಿ. ಮತ್ತು ಹೆಚ್. ನಿಬಂಧನೆಗಳು (Standard bidding Documents of MOSRT&H New Delhi) ಇವುಗಳಿಗೆ ಒಳಪಟ್ಟು ಪೂರ್ಣಗೊಳಿಸಿದ ಬಿಡ್ಡ್‌ಗಳನ್ನು ಅಧೀಕ್ಷಕ ಅಭಿಯಂತರರು ರಾಷ್ಟ್ರೀಯ ಹೆದ್ದಾರಿಗಳ ವೃತ್ತ, ಬೆಂಗಳೂರು ಅಥವಾ ಕಾರ್ಯನಿರ್ವಾಹಕ ಅಭಿಯಂತರರು ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ, ಬೆಂಗಳೂರು ಇವರುಗಳ ಕಛೇರಿಯಲ್ಲಿ 28.08.2009 ರ ಸಂಜೆ 4.00 ಗಂಟೆವರೆಗೆ ಸ್ವೀಕರಿಸಲಾಗುವುದು. ಈ ಕೆಳಗೆ ರುಜು ಮಾಡಿರುವವರು ಈ ಕೆಳಗೆ ತಿಳಿಸಿರುವ ದಿನಗಳಂದು ಬಿಡ್ಡುಗಳನ್ನು ತೆರೆಯುವರು. ಮುಂದೆ ತಿಳಿಸಿರುವ ದಿನಾಂಕಗಳಲ್ಲಿ ಯಾವುದಾದರೂ ಸಾರ್ವಜನಿಕ ರಜಾದಿನವಾಗಿದ್ದಲ್ಲಿ ಅನುಕೂಲವಾದ ಮುಂದಿನ ದಿನಾಂಕವನ್ನು ತಿಳಿಸಲಾಗುವುದು.

ಅಂಕಿಗಳು ರೂಗಳಲ್ಲಿ

| ಕ್ರ. ಸಂ. | ಕಾಮಗಾರಿಗಳ ಹೆಸರು | ಟೆಂಡರಿಗಿಟ್ಟಿರುವ ಮೊಬಲಗು | ಇ.ಎಂ.ಡಿ. | ಟೆಂಡರ್ ಪತ್ರದ ಬೆಲೆ | ಕಾಮಗಾರಿ ಪೂರ್ಣಗೊಳಿಸುವ ಕಾಲ |
|---|---|---|---|---|---|
| 1 | ರಾ.ಹೆ.206ರ ಕಿ.ಮೀ. 0.00 ರಿಂದ ಕಿ.ಮೀ6.00 ಮತ್ತು ಕಿ.ವಿ ವರೆಗೆ ನಾಲ್ಕು ಪಥ ರಸ್ತೆ ನಿರ್ಮಾಣ ಕಾಮಗಾರಿ | 1700.00 ಲಕ್ಷಗಳು | 34.00 ಲಕ್ಷಗಳು | 30,000/– +ವ್ಯಾಟ್ | 12 ತಿಂಗಳು |

**ನಿಗದಿಪಡಿಸಿದ ದಿನಾಂಕಗಳು:**

1. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ ಮತ್ತು ಖಾಲಿ ಟೆಂಡರ್ ಪತ್ರಗಳನ್ನು ಕೊಡುವ ದಿನಾಂಕ:17.08.2009 ರವರೆಗೆ
2. ಪೂರ್ವಭಾವಿ ಸಭೆ 20.08.2009 ರಿಂದ 22.08.2009 ವರೆಗೆ
3. ಮೊಹರಾದ ಟೆಂಡರ್ ಸ್ವೀಕರಿಸಲು ಕೊನೆಯ ದಿನಾಂಕ: 28.08.2009 (ಸಂಜೆ 4.00 ಗಂಟೆಯೊಳಗೆ)

ಹೆಚ್ಚಿನ ವಿವರಗಳನ್ನು ಮೇಲ್ಕಂಡ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯನಿರ್ವಾಹಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ, ಬೆಂಗಳೂರು.

**PUBLIC WORKS DEPARTMENT**
**(NATIONAL HIGHWAYS)**
**Office of the Executive Engineer, National Highways Special Division, Bangalore**
**NATIONAL COMPETITIVE BIDDING**
**{Invitation for Bids (IFB)} Tender Notification No 03/2009-10**
**No.EE/NH.Spl.Dn/AE-3/FL/0-6/NH-206/NIT-03/09-10, Dated: 23rd June 2009**

Sealed Item Rate Tenders are invited for the works noted below under TWO COVER BID SYSTEM as per Karnataka Transparency in Public procurement Act 2000 in prescribed form in duplicate are invited from the Class-I Contractors registered in KPWD/M.O.S.R.T & H approved Firms. Two cover bid system of tendering consists of “Technical Bid” and “Financial Bid”. Bids will be received in two parts in two different sealed covers marked as “Technical Bid” and “Financial Bid”. These two covers shall be sealed and kept in another sealed cover duly superscribing name of the work and shall be addressed to the undersigned with name and full postal address of the bidder. Completed bids will be received in the office of the Superintending Engineer, National Highways Circle, Bangalore or in the office of the Executive Engineer, National Highway Special division, Bangalore up to 4.00 P.M. on 28.08.2009, subject to the conditions laid down in Standard Bidding Documents of MOSRT&H New Delhi and as in Karnataka Transparency in Public Procurement Act 2000. The Technical Bids will be opened by the undersigned on

ಬಹಿರಂಗ ಹರಾಜಿನ ನಂತರ ತೆರೆಯಲಾಗುವುದು. ಒಂದು ವೇಳೆ ಆ ದಿನ ಸಾಧ್ಯವಾಗದಿದ್ದಲ್ಲಿ ಮುಂದಿನ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

3. ಮೇಲೆ ತಿಳಿಸಿರುವ ದಿನಾಂಕಗಳಲ್ಲಿ ಯಾವುದಾದರೂ ಸಾರ್ವಜನಿಕ ರಜೆ ಆಗಿದ್ದಲ್ಲಿ ಮುಂದಿನ ಕೆಲಸದ ದಿನವು ಅನ್ವಯವಾಗುತ್ತದೆ.
4. ಟೆಂಡರ್‌ನ್ನು ಅಂತಿಮವಾಗಿ ಒಪ್ಪುವ ಅಥವಾ ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಧಿಕಾರವನ್ನು ಸಕ್ಷಮ ಪ್ರಾಧಿಕಾರ ಹೊಂದಿರುತ್ತದೆ.
5. ಬಹಿರಂಗ ಹರಾಜು ದಿನಾಂಕ: 27.07.2009 ರಂದು ಸಂಜೆ 4.00 ಗಂಟೆಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ಉಪ–ವಿಭಾಗ, ಕಾರವಾರ ಇವರ ಕಚೇರಿಯಲ್ಲಿ ನಡೆಯಲಿದ್ದು ಟೆಂಡರ್ ಸಲ್ಲಿಸಿರುವ ಟೆಂಡರ್‌ದಾರರು ಹಾಗೂ ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವವರು ನಿಗದಿತ ಠೇವಣಿಯನ್ನು ಡಿ.ಡಿ ರೂಪದಲ್ಲಿ ಹರಾಜಿಗೆ ಮುನ್ನ ಸಲ್ಲಿಸಿ ಹರಾಜಿನಲ್ಲಿ ಭಾಗವಹಿಸಬಹುದು.
6. ಯಶಸ್ವಿ ಬಿಡ್ಡುದಾರರು ಸ್ಥಳದಲ್ಲಿಯೇ ಸಾಮಗ್ರಿಯ ಬಿಡ್ಡಿನ 50% ರಷ್ಟನ್ನು, ಹಾಗೂ 12.50% ಮಾರಾಟ ತೆರಿಗೆ ಮೊತ್ತವನ್ನು ಪಾವತಿಸತಕ್ಕದ್ದು.
7. ಸಕ್ಷಮ ಪ್ರಾಧಿಕಾರದಿಂದ ಟೆಂಡರ್: ಬಹಿರಂಗ ಹರಾಜಿನಲ್ಲಿಯ ಅತೀ ಹೆಚ್ಚಿನ ಬಿಡ್ಡುದಾರರು ದರದ ಮಂಜೂರಾತಿ ಪಡೆಯಲ್ಪಟ್ಟ ನಂತರ, ಯಶಸ್ವಿ ಬಿಡ್ಡುದಾರರು, ಬಾಕಿ ಉಳಿದ ಮೊತ್ತವನ್ನು ತೆರಿಗೆ ಸಹಿತ ಸಂದಾಯ ಮಾಡಿ ಸಂಬಂಧಿಸಿದ ಸಾಮಗ್ರಿಗಳನ್ನು ವಿಳಂಬ ಮಾಡದೇ 15 ದಿನಗಳ ಅವಧಿಯಲ್ಲಿ ಒಯ್ಯತಕ್ಕದ್ದು. ತಪ್ಪಿದಲ್ಲಿ ಸದರಿ ಸಾಮಗ್ರಿಯ ಮೇಲೆ ದಂಡವನ್ನು ವಿಧಿಸಲಾಗುವುದು, ಇದಕ್ಕೂ ತಪ್ಪಿದಲ್ಲಿ (ಮಂಜೂರಾತಿಯಾದ ಒಂದು ತಿಂಗಳ ನಂತರ) ಸದರಿ ಮೊಬಲಗನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
8. ಸಾಮಗ್ರಿಗಳ ಬಗ್ಗೆ ಹೆಚ್ಚಿನ ವಿವರಗಳನ್ನು ಕಚೇರಿ ವೇಳೆಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರ್, ರಾಷ್ಟ್ರೀಯ ಹೆದ್ದಾರಿ ಉಪ–ವಿಭಾಗ, ಕಾರವಾರ ಇವರ ಕಛೇರಿಯಿಂದ ಪಡೆಯಬಹುದು.

ಹೆದ್ದಾರಿ ಆಡಳಿತ ಮತ್ತು ಕಾರ್ಯನಿರ್ವಾಹಕ ಇಂಜಿನಿಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಕಾರವಾರ.

ಪಿ.ಆರ್. 558

**ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಬಂದರು ಅಧಿಕಾರಿಯವರ ಕಚೇರಿ, ಹಳೇ ಮಂಗಳೂರು ಬಂದರು, ಮಂಗಳೂರು – 575 001**

**ಹರಾಜು ಪ್ರಕಟಣೆ**

**ನಂ.ಸಾಮಗ್ರಿ/ಸಿಆರ್–02/2008–09, ದಿನಾಂಕ: ಜೂನ್ 2009**

**ವಿಷಯ:** ಬಂದರು ಕಛೇರಿ, ಮಂಗಳೂರು – ಹೆಚ್ಚುವರಿ ಹಳೆಯ ಸಾಮಗ್ರಿಗಳ ವಿಲೇವಾರಿ ಹರಾಜು ಮಾಡುವ ಕುರಿತು.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ ಬಂದರು ಕಛೇರಿ, ಮಂಗಳೂರಿನಲ್ಲಿ ನಾವೆಯ ಉಪಯೋಗಕ್ಕಾಗಿ ಹೆಚ್ಚುವರಿಯಾಗಿ ಪೂರೈಸಿದ (1) ಪ್ರೊಫೈಲರ್ – ಎರಡು ಸಂಖ್ಯೆಯದು (2) ಪ್ರೊಫೈಲರ್ ಸಾಫ್ಟ್ – ಎರಡು ಸಂಖ್ಯೆಯದು (3) ಪಂಪ್ ಸೆಟ್ – ಒಂದು ಸಂಖ್ಯೆಯದು ಇವುಗಳನ್ನು ಹರಾಜು ಮೂಲಕ ವಿಲೇವಾರಿ ಮಾಡಲು ಬಂದರು ಕಛೇರಿ, ಮಂಗಳೂರಿನಲ್ಲಿ ದಿನಾಂಕ: 3.08.2009 ರಂದು ಅಪರಾಹ್ನ 4.00 ಗಂಟೆಗೆ ಬಹಿರಂಗ ಹರಾಜು ಕರೆಯಲಾಗಿದ್ದು, ಆಸಕ್ತಿಯುಳ್ಳ ಸಾರ್ವಜನಿಕರು / ಹರಾಜುದಾರರು ಹರಾಜಿನಲ್ಲಿ ಭಾಗವಹಿಸಲು ಕೋರಿದೆ. ಈ ಮೇಲೆ ವಿವರಿಸಲಾದ ಸಾಮಗ್ರಿಗಳ ತಗ್ಗುಬೆಲೆ ರೂ.1,10,000.00 ಇರುತ್ತದೆ.

**ನಿಬಂಧನೆ ಹಾಗೂ ಷರತ್ತುಗಳು**

1. ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಚಿಸುವವರು ರೂ. 1,000.00 ಮುಂಗಡ ಠೇವಣಿಯನ್ನು ನಗದಾಗಿ ಹರಾಜು ನಡೆಯುವ ಮೊದಲು 3.00 ಗಂಟೆಯ ಒಳಗಾಗಿ ಠೇವಣಿ ಪಾವತಿ ಮಾಡತಕ್ಕದ್ದು. ಮುಂಗಡ ಠೇವಣಿಯನ್ನು ಪಾವತಿಸುವವರು ಮಾತ್ರ ಹರಾಜಿನಲ್ಲಿ ಭಾಗವಹಿಸತಕ್ಕದ್ದು. ಮುಂಗಡ ಠೇವಣಿ ಪಾವತಿಸದಿರುವವರು ಭಾಗವಹಿಸಲು ಅವಕಾಶವಿರುವುದಿಲ್ಲ.
2. ಸವಾಲು ಸ್ವೀಕೃತವಾದಲ್ಲಿ ತಾತ್ಕಾಲಿಕವಾಗಿ ಅಂಗೀಕರಿಸಿದ ಮೊತ್ತದ ಶೇಕಡಾ 25 ರಷ್ಟು ಮೌಲ್ಯವನ್ನು ಹರಾಜು ಮಾಡಿದ ತಕ್ಷಣ ಸರಕಾರಕ್ಕೆ ಪಾವತಿಸತಕ್ಕದ್ದು. ತಪ್ಪಿದಲ್ಲಿ ಮುಂಗಡ ಠೇವಣಿಯನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ತಪ್ಪಿದಲ್ಲಿ ಮರು ಹರಾಜು ಮಾಡಲಾಗುವುದು.

3. ಯಶಸ್ವಿ ಸವಾಲುದಾರರು ಮೇಲಾಧಿಕಾರಿಯವರ ಅನುಮೋದನೆಯ ನಂತರ ನಿಯಮಾನುಸಾರ ಏಳು ದಿನಗಳೊಳಗಾಗಿ ಉಳಿದ ಶೇಕಡಾ 75 ರಷ್ಟು ಹಣವನ್ನು ಹಾಗೂ ಪೂರ್ತಿ ತೆರಿಗೆ ಸಹಿತ ನಗದು ರೂಪದಲ್ಲಿ ಪಾವತಿಸಿ ವಸ್ತುಗಳನ್ನು ಅವರ ಸ್ವಂತ ಖರ್ಚಿನಲ್ಲಿ ಇದ್ದ ಸ್ಥಳದಿಂದ ತೆಗೆದುಕೊಂಡು ಹೋಗತಕ್ಕದ್ದು.
4. ಯಶಸ್ವಿ ಬಿಡ್ಡುದಾರರು/ಸವಾಲುದಾರರು ಹೊರತಾಗಿ ಉಳಿದ ಸವಾಲುದಾರರು ಮುಂಗಡ ಠೇವಣಿಗಳನ್ನು ಹರಾಜು ಮುಗಿದ ನಂತರ ಹಿಂದಿರುಗಿಸಲಾಗುವುದು.
5. ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಅಥವಾ ಅಂಗೀಕರಿಸುವ ಹಕ್ಕನ್ನು ಸಂಬಂಧಪಟ್ಟ ಬಂದರು ಅಧಿಕಾರಿಯವರು ಕಾಯ್ದಿರಿಸಿರುತ್ತಾರೆ.
6. ಆಸಕ್ತ ಸವಾಲುದಾರರು / ಬಿಡ್ಡುದಾರರು ಹರಾಜಿಗೆ ಹಾಕುವ ಸಾಮಗ್ರಿಗಳನ್ನು ಕಛೇರಿಯ ವೇಳೆಯಲ್ಲಿ ಬಂದು ಬಂದರು ಅಧಿಕಾರಿಯವರ ಅನುಮತಿ ಪಡೆದು ಪರಿಶೀಲಿಸಬಹುದು.

ಪಿ.ಆರ್. 519 ಬಂದರು ಅಧಿಕಾರಿ, ಮಂಗಳೂರು.

**ವಾಣಿಜ್ಯ ತೆರಿಗೆ ಆಯುಕ್ತರವರ ಕಚೇರಿ, ವಾಣಿಜ್ಯ ತೆರಿಗೆ ಕಾರ್ಯಾಲಯ–1, ಗಾಂಧಿನಗರ, ಬೆಂಗಳೂರು**

**ಸಾರ್ವಜನಿಕ ಹರಾಜು ಮಾರಾಟ ಪ್ರಕಟಣೆ**

**ಸಂಖ್ಯೆ: ಆರ್.ಎನ್.ಟಿ: ಸಿ.ಆರ್.–22/08–09, ಬೆಂಗಳೂರು, ದಿನಾಂಕ: 24ನೇ ಜೂನ್ 2009**

**ವಿಷಯ:** ಬೆಂಗಳೂರಿನ ವಾಣಿಜ್ಯ ತೆರಿಗೆಯ ಇಲಾಖೆಯ ಹೊಸೂರು ರಸ್ತೆ (ಒಳ) ತನಿಖಾ ಠಾಣೆಗೆ ವಶಪಡಿಸಿಕೊಂಡಿರುವ ಜಾಗದಲ್ಲಿರುವ ಹಳೆಯ ವೇ ಬ್ರಿಡ್ಜ್‌ನ್ನು ಬಹಿರಂಗ ಹರಾಜು ಮಾರಾಟದ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಸಾರ್ವಜನಿಕ ಮಾಹಿತಿಗಾಗಿ ಈ ಮೂಲಕ ತಿಳಿಯಪಡಿಸುವುದೇನೆಂದರೆ, ದಿನಾಂಕ: 27.07.2009ರಂದು ಮಧ್ಯಾಹ್ನ 3.00 ಗಂಟೆಗೆ ಬೆಂಗಳೂರಿನ ವಾಣಿಜ್ಯ ತೆರಿಗೆ ಇಲಾಖೆಯ ಹೊಸೂರು ರಸ್ತೆ (ಒಳ) ತನಿಖಾ ಠಾಣೆಗೆ ವಶಪಡಿಸಿಕೊಂಡಿರುವ ಜಾಗದಲ್ಲಿರುವ ಹಳೆಯ ವೇ ಬ್ರಿಡ್ಜನ್ನು ಬಹಿರಂಗ ಹರಾಜು ಮಾರಾಟದ ಮೂಲಕ ವಿಲೇವಾರಿ ಮಾಡಲಾಗುವುದು. ವಿವರಗಳು ಈ ಕೆಳಕಂಡಂತಿರುತ್ತವೆ.

| | | |
|---|---|---|
| 1. ಬಹಿರಂಗ ಹರಾಜು ಮಾರಾಟ ದಿನಾಂಕ | : | 27.07.2009 ಮಧ್ಯಾಹ್ನ 300 ಗಂಟೆಗೆ |
| 2. ಭದ್ರತಾ ಠೇವಣಿ | : | ರೂ.10,000–00 |
| 3. ಹರಾಜು ನಡೆಯುವ ಸ್ಥಳ | : | ಹೊಸೂರು ರಸ್ತೆ ತನಿಖಾ ಠಾಣೆ (ಒಳ) ಅತ್ತಿಬೆಲೆ, ಬೆಂಗಳೂರು |

**ನಿಬಂಧನೆಗಳು:**

1. ಮೇಲೆ ತಿಳಿಸಿರುವ ಹಳೆಯ ವೇ ಬ್ರಿಡ್ಜ್‌ನ ಹರಾಜನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಜಾಗೃತಿ) ಬೆಂಗಳೂರು ಅವರ ಸಮ್ಮುಖದಲ್ಲಿ ನಡೆಸಲಾಗುವುದು.
2. ವೇ ಬ್ರಿಡ್ಜನ್ನು "ಎಲ್ಲಿ ಹೇಗಿದೆಯೋ ಹಾಗೆ" ಷರತ್ತಿನ ಮೇಲೆ ಬಹಿರಂಗ ಹರಾಜು ಮಾರಾಟ ನಡೆಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸುವವರು ಹರಾಜಿಗೆ ಮುನ್ನ ಠೇವಣಿ ಹಣ ರೂ.10,000–00ವನ್ನು ಡಿ.ಡಿ. ರೂಪದಲ್ಲಿ ವಾಣಿಜ್ಯ ತೆರಿಗೆ ಆಯುಕ್ತರ ಪರವಾಗಿ ಪಾವತಿ ಮಾಡಬೇಕಾಗುತ್ತದೆ.
4. ಹರಾಜಿನಲ್ಲಿ ಹಣ ಕಟ್ಟಿ ಯಶಸ್ವಿಯಾಗದವರಿಗೆ ಕಟ್ಟಿದ ಹಣವನ್ನು ಕೂಡಲೇ ಹಿಂತಿರುಗಿಸಲಾಗುವುದು.
5. ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರು ಹರಾಜು ಮುಗಿದ ಕೂಡಲೇ ಹರಾಜು ಮಾರಾಟದ ಮೊತ್ತ ಹಾಗೂ ತೆರಿಗೆಗಳು ಸೇರಿದಂತೆ ಶೇಕಡಾ 25 ಭಾಗ ಹಣವನ್ನು ಪಾವತಿಮಾಡುವುದು. ತಪ್ಪಿದಲ್ಲಿ, ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.
6. ಉಳಿದ ಶೇಕಡಾ 75 ಭಾಗ (ಠೇವಣಿ ಹಣವನ್ನು ಕಳೆದು) ಹರಾಜಿನ ಹಣವನ್ನು ಹರಾಜಿನ ದಿನಾಂಕದಿಂದ 15 (ಹದಿನೈದು) ದಿನಗಳೊಳಗಾಗಿ ಪಾವತಿಸಿ, ನಂತರ ತಮ್ಮ ಸ್ವಂತ ಖರ್ಚಿನಲ್ಲಿ ವೇ ಬ್ರಿಡ್ಜನ್ನು ಹಾಲಿ ಇರುವ ಜಾಗದಿಂದ ಯಥಾಸ್ಥಿತಿಯಲ್ಲಿ ಸಾಗಿಸಿಕೊಳ್ಳತಕ್ಕದ್ದು.
7. ಹರಾಜಿನಲ್ಲಿ ತೆಗೆದುಕೊಂಡ ವೇ ಬ್ರಿಡ್ಜನ್ನು ನಿಗದಿತ ಅವಧಿಯೊಳಗೆ ಪೂರ್ತಿ ಹಣವನ್ನು ಕಟ್ಟಿ ಸ್ವಾಧೀನಕ್ಕೆ ತೆಗೆದುಕೊಳ್ಳದೆ ಹೋದ ಪಕ್ಷದಲ್ಲಿ ಪ್ರತಿ ದಿನಕ್ಕೆ ರೂ.50–00ರಂತೆ ನೆಲಬಾಡಿಗೆ ವಿಧಿಸಲಾಗುವುದು. ಮತ್ತು ಒಂದು ತಿಂಗಳೊಳಗಾಗಿ ಪೂರ್ತಿ ಹಣ ಕಟ್ಟದಿದ್ದರೆ, ಕಟ್ಟಿರುವ ಹಣವನ್ನು ಮುಟ್ಟುಗೋಲು ಹಾಕಿಕೊಂಡು ವೇ ಬ್ರಿಡ್ಜನ್ನು ಮತ್ತೆ ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.
8. ಇಲಾಖಾ ಸಿಬ್ಬಂದಿಯವರು ಹರಾಜಿನಲ್ಲಿ ಭಾಗವಹಿಸಲು ಅರ್ಹರಲ್ಲ.

9. ಬಹಿರಂಗ ಹರಾಜಿನಲ್ಲಿ ವಾದ ವಿವಾದಗಳಿಗೆ ಅವಕಾಶವಿರುವುದಿಲ್ಲ. ಯಾವುದೇ ತಕರಾರುಗಳಿಗೆ ವಾಣಿಜ್ಯ ತೆರಿಗೆ ಆಯುಕ್ತರ ತೀರ್ಮಾನವೇ ಅಂತಿಮವಾಗಿರುತ್ತದೆ.
10. ಯಾವುದೇ ಸಂದರ್ಭದಲ್ಲಿಯೂ ಹರಾಜು ಮಾರಾಟವನ್ನು ಅಂಗೀಕರಿಸುವ, ತಿರಸ್ಕರಿಸುವ, ಮುಂದೂಡುವ ಅಥವಾ ರದ್ದುಪಡಿಸುವ ಎಲ್ಲಾ ಅಧಿಕಾರಗಳನ್ನು ವಾಣಿಜ್ಯ ತೆರಿಗೆ ಆಯುಕ್ತರು ಹೊಂದಿರುತ್ತಾರೆ.

ಪಿ.ಆರ್. 566 ವಾಣಿಜ್ಯ ತೆರಿಗೆಗಳ ಆಯುಕ್ತರು (ಕರ್ನಾಟಕ), ಬೆಂಗಳೂರು.

**ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಕಾರ್ಯನಿರ್ವಾಹಕ ಇಂಜಿನಿಯರರ ಕಛೇರಿ, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**

**ಮಂಗಳೂರು ವಿಭಾಗ, ಮಂಗಳೂರು**

**ಇ–ಟೆಂಡರ್ – ಟೆಂಡರ್ ಪ್ರಕಟಣೆ (ದ್ವಿಲಕೋಟೆ ಪದ್ಧತಿ)**

**ಲೋ.ಇ:ಮಂ.ವಿ:ಟಿ.ಎನ್.ಡಿ(14ಇ):2009–10:ಎಇ1, ಮಂಗಳೂರು, ದಿನಾಂಕ: 27ನೇ ಜೂನ್ 2009**

1 ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಇ–ಟೆಂಡರ್‌ನ್ನು ಕರ್ನಾಟಕ ಸರಕಾರದ ರಾಜ್ಯಪಾಲರ ಪರವಾಗಿ ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ https://eproc.karnataka.gov.in ನಲ್ಲಿ ಕಾರ್ಯನಿರ್ವಾಹಕ ಇಂಜಿನಿಯರರು, ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಮಂಗಳೂರು ವಿಭಾಗ, ಮಂಗಳೂರು ಇವರು ಅರ್ಹರಾದ ಗುತ್ತಿಗೆದಾರರಿಂದ ಟೆಂಡರ್‌ನ್ನು ದ್ವಿಲಕೋಟೆ ಪದ್ಧತಿಯಲ್ಲಿ ಆಹ್ವಾನಿಸಿರುತ್ತಾರೆ. ಟೆಂಡರುದಾರರು ಟೆಂಡರ್ ನಿಯಮಾವಳಿಯ ಕ್ಲಾಜ್ 3 ರಂತೆ ಕನಿಷ್ಠ ಅರ್ಹತೆಯನ್ನು ಪಡೆದಿರಬೇಕು ಎಂಬುದನ್ನು ಗಮನಿಸಲು ಸೂಚಿಸಲಾಗಿದೆ.

2. ದಿನಾಂಕ: 21.7.2009 ರಿಂದ 27.7.2009ರ ವರೆಗೆ ಟೆಂಡರುದಾರರು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂತರ್‌ಜಾಲದ ವೆಬ್‌ಸೈಟ್ ಮುಖಾಂತರ ಟೆಂಡರು ಡಾಕ್ಯುಮೆಂಟ್‌ಗಳನ್ನು ಪಡೆಯಬಹುದಾಗಿರುತ್ತದೆ. (Download).

3. ಟೆಂಡರುಗಳು ಈ ಕೆಳಗೆ ನೀಡಲಾದ ವಿವರದಂತೆ ಕಾಮಗಾರಿಗೆ ನಿಗದಿಪಡಿಸಿದ ಇ.ಎಂ.ಡಿಯನ್ನು ಟೆಂಡರ್ ಜೊತೆಯಲ್ಲಿ ಲಗತ್ತಿಸಬೇಕು. ಇ.ಎಂ.ಡಿ.ಯನ್ನು ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಸೂಚಿಸಿರುವಂತೆ ಯಾವುದಾದರೂ ಒಂದು ರೀತಿಯಲ್ಲಿ ಸಲ್ಲಿಸಬಹುದಾಗಿರುತ್ತದೆ ಮತ್ತು ಅದರ ಊರ್ಜಿತ ಅವಧಿಯು ಟೆಂಡರು ಊರ್ಜಿತ ಅವಧಿಗಿಂತ 45 ದಿನಗಳು ಹೆಚ್ಚಾಗಿ ಇರಬೇಕು.

4. ಟೆಂಡರುಗಳನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಆನ್‌ಲೈನ್‌ನಲ್ಲಿ ದಿನಾಂಕ: 27.7.2009ರ ಅಪರಾಹ್ನ 4.00 ಗಂಟೆ (16 :00 ಗಂಟೆ) ಒಳಗೆ ಸಲ್ಲಿಸತಕ್ಕದ್ದು. ಟೆಂಡರನ್ನು ಕರ್ನಾಟಕ ಸರಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನ ಮಾರ್ಗಸೂಚಿಯಂತೆ ತೆರೆಯಲಾಗುವುದು.

5. ಹೆಚ್ಚಿನ ವಿವರಗಳನ್ನು ಟೆಂಡರು ಡಾಕ್ಯುಮೆಂಟ್‌ನಲ್ಲಿ ಪಡೆಯಬಹುದಾಗಿರುತ್ತದೆ.

| ಕ್ರ. ಸಂ. | ಕಾಮಗಾರಿಯ ಹೆಸರು | ಟೆಂಡರಿಗಿಟ್ಟ ಮೊತ್ತ (ರೂ.ಲಕ್ಷಗಳಲ್ಲಿ) | ಇ.ಎಂ.ಡಿ. ಠೇವಣಿ (ಲಕ್ಷ ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಧಿ (ಮಳೆಗಾಲ ಸೇರಿ) |
|---|---|---|---|---|
| | **ಲೆಕ್ಕ ಶೀರ್ಷಿಕೆ 5054 ಒ.ಆರ್.ಎಫ್** | | | |
| 1 | ಬಂಟ್ವಾಳ ತಾಲ್ಲೂಕಿನ ಬಂಟ್ವಾಳ ಕ್ಷೇತ್ರದ ಬೈತುರ್ಲಿ–ನೀರುಮಾರ್ಗ ಕಲ್ಪನೆ ರಸ್ತೆಯ ಕಿ.ಮೀ 13.00 ರಿಂದ 15.20ರ ವರೆಗೆ ರಸ್ತೆ ಅಗಲಗೊಳಿಸಿ ಡಾಂಬರೀಕರಣ ಮತ್ತು ಅಭಿವೃದ್ಧಿ | 60.00 | 1.20 | 9 ತಿಂಗಳು |

ಕಾರ್ಯನಿರ್ವಾಹಕ ಇಂಜಿನಿಯರ್,
ಪಿ.ಆರ್. 532 ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ,
ಮಂಗಳೂರು ವಿಭಾಗ, ಮಂಗಳೂರು.

## ಕಾರಾಗೃಹಗಳ ಇಲಾಖೆ

**ಮುಖ್ಯ ಅಧೀಕ್ಷಕರ ಕಾರ್ಯಾಲಯ, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಎಲೆಕ್ಟ್ರಾನಿಕ್ ಸಿಟಿ ಅಂಚೆ, ಬೆಂಗಳೂರು–560 100**

**ಪ್ರಕಟಣೆ**

**ಸಂಖ್ಯೆ:ಕೇಕಾಬೆಂ/ಕಾವಿ/ಅಂಗಡಿಮಳಿಗೆ/907/2009–10, ದಿನಾಂಕ: 28ನೇ ಏಪ್ರಿಲ್ 2009**

ಈ ಮೂಲಕ ಸಾರ್ವಜನಿಕರಲ್ಲಿ ತಿಳಿಯಪಡಿಸುವುದೇನೆಂದರೆ, ಪರಪ್ಪನ ಅಗ್ರಹಾರ ಕೇಂದ್ರ ಕಾರಾಗೃಹ ಸಮುಚ್ಚಯದಲ್ಲಿನ ಅಂಗಡಿ ಮಳಿಗೆಗಳಿಗೆ ಬಹಿರಂಗ ಹರಾಜು ಮೂಲಕ ಸ್ಪರ್ಧಾತ್ಮಕ ದರಗಳನ್ನು ಕರೆದು 2009–10ನೇ ಸಾಲಿಗೆ ಅಂಗಡಿ ಮಳಿಗೆಗಳನ್ನು ಬಾಡಿಗೆಗೆ ನೀಡುವ ಬಹಿರಂಗ ಹರಾಜನ್ನು **ದಿನಾಂಕ:27.07.2009 ರಂದು ಬೆಳಿಗ್ಗೆ 11.00 ಗಂಟೆಗೆ** ನಿಗದಿಪಡಿಸಿದೆ. ಸಾರ್ವಜನಿಕರು ಈ ಬಹಿರಂಗ ಹರಾಜಿನಲ್ಲಿ ಭಾಗವಹಿಸುವಂತೆ ಕೋರಿದೆ.

ಈ ಸಂಸ್ಥೆಯಲ್ಲಿ ಸುಮಾರು 5000 ಕ್ಕೂ ಹೆಚ್ಚಿನ ಬಂದಿಗಳಿದ್ದು, ಪ್ರತಿದಿನ (ಸರ್ಕಾರಿ ರಜಾ ದಿನಗಳನ್ನು ಹೊರತುಪಡಿಸಿ) ನೂರಾರು ಜನರು ಸಂದರ್ಶನಕ್ಕೆ ಬಂದು ಹೋಗುತ್ತಿರುತ್ತಾರೆ. ಅಲ್ಲದೆ 600 ಜನ ಸಿಬ್ಬಂದಿಗಳು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಸಮುಚ್ಚಯದಲ್ಲಿರುವ 187 ವಸತಿ ಗೃಹಗಳಲ್ಲಿ ಸಿಬ್ಬಂದಿಗಳು ವಾಸ ಇರುವುದರಿಂದ ಸದಾ ಜನದಟ್ಟಣೆಯಿಂದ ಕೂಡಿರುವ ಈ ಸ್ಥಳದಲ್ಲಿ ಅಂಗಡಿ ಮಳಿಗೆಗಳನ್ನು ನಡೆಸುವುದರಿಂದ ವ್ಯಾಪಾರಿ ಉದ್ದೇಶವು ಸಫಲವಾಗುವ ಭರವಸೆ ನೀಡುತ್ತಾ ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸುವಂತೆ ಕೋರಿದೆ.

ಅಂಗಡಿ ಮಳಿಗೆಗಳು ತಿಂಗಳ ಅಡಿಗೆ ಮತ್ತು ಇತರೇ ವಿವರಗಳು ಈ ಕೆಳಕಂಡಂತೆ ಇರುತ್ತದೆ.

| ಕ್ರ. ಸಂ. | ವಾಣಿಜ್ಯ ಮಳಿಗೆಯ ಹೆಸರು/ಕ್ರಮ ಸಂಖ್ಯೆ | ವಿಸ್ತೀರ್ಣ ಚ.ಅಡಿ.ಗಳಲ್ಲಿ | ಅವಧಿ | ಮಾಸಿಕ ಬಾಡಿಗೆ ಶುಲ್ಕ | 10 ತಿಂಗಳ ಬಾಡಿಗೆಯಷ್ಟು ಭದ್ರತಾ ಠೇವಣಿ | ಹರಾಜಿನಲ್ಲಿ ಭರಿಸಬೇಕಾದ ಇಡುಮ ಠೇವಣಿ |
|---|---|---|---|---|---|---|
| 1 | ಫ್ಯಾನ್ಸಿ ಶಾಪ್–01 | (3.25x6) (1 ಯೂನಿಟ್) | 11 ತಿಂಗಳು | 980/– | ನಿಗದಿಯಾದ ಬಾಡಿಗೆಯ 10 ತಿಂಗಳ ಮೊತ್ತವನ್ನು ಠೇವಣಿಯಾಗಿ ಇಡುವುದು | 1,000/– |
| 2 | ಹಾಲಿನ ಮಳಿಗೆ–04 | (3.25x6) (1 ಯೂನಿಟ್) | 11 ತಿಂಗಳು | 980/– | | 1,000/– |
| 3 | ದಾಸ್ತಾನು ಮಳಿಗೆ–10 | (3.25x6) (1 ಯೂನಿಟ್) | 11 ತಿಂಗಳು | 980/– | | 1,000/– |
| 4 | ಹಿಟ್ಟಿನ ಗಿರಣಿ–11 | (3.25x6) (1 ಯೂನಿಟ್) | 11 ತಿಂಗಳು | 980/– | | 1,000/– |

ಮೇಲ್ಕಂಡ ಅಂಗಡಿ ಮಳಿಗೆಗಳಿಗೆ ಭಾಗವಹಿಸುವವರು ಸಂಬಂಧಪಟ್ಟ ಅಧಿಕಾರಿಯಿಂದ ಸಂಬಂಧಿಸಿದ ಲೈಸನ್ಸ್ ಪಡೆದುಕೊಂಡಿರಬೇಕು. ಬಹಿರಂಗ ಹರಾಜಿನಲ್ಲಿ ಅದರ ದಾಖಲೆಗಳನ್ನು ಒಪ್ಪಿಸಬೇಕಾಗುವುದು.

ಮೇಲ್ಕಂಡ ಅಂಗಡಿ ಮಳಿಗೆಯನ್ನು ಹೆಚ್ಚಿನ ಮೊಬಲಿಗೆ ಹರಾಜಿನಲ್ಲಿ ಪಡೆದುಕೊಂಡ ಮೇಲೆ ಹರಾಜಿನಲ್ಲಿ ಕೂಗಿರುವ ಹೆಚ್ಚಿನ ಮೊಬಲಗು 10 ತಿಂಗಳ ಬಾಡಿಗೆ ಮೇಲೆ ಶೇಕಡ 10 ರಷ್ಟು ಪ್ರಾರಂಭಿಕ ಠೇವಣಿಯನ್ನು ಸ್ಥಳದಲ್ಲಿಯೇ ಭರಿಸಬೇಕಾಗುವುದು.

ಹೆಚ್ಚಿನ ಮಾಹಿತಿಗಳು ಮತ್ತು ನಿಬಂದನೆಗಳು ವಿವರಗಳು ಬೇಕಾಗಿದ್ದಲ್ಲಿ ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು ಇವರಿಂದ ಕಛೇರಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಹರಾಜಿನ ದರವನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರ ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ರವರ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಪಿ.ಆರ್. 572 ಮುಖ್ಯ ಅಧೀಕ್ಷಕರು, ಕೇಂದ್ರ ಕಾರಾಗೃಹ, ಬೆಂಗಳೂರು.

**FORM - IV**

**(See Rule 12)**

**NOTICE**

It is hereby notified that the undersigned has changed his/her name from **SADASHIV SHANKAR CHAMBAR** to **SADASHIV SHANKAR CHOUGALA**

P.D. 109 **SADASHIV SHANKAR CHAMBAR**

**FORM - IV**

**(See Rule 12)**

**NOTICE**

It is hereby notified that the undersigned has changed his/her name from **F.S. CHALAVADI** to **F.S. SOMAGIRI**

P.D. 110 **F.S. CHALAVADI**

## ಲೋಕೋಪಯೋಗಿ ಇಲಾಖೆ

## ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ

**ಅಲ್ಪಾವಧಿ ಟೆಂಡರ್‌ಗಳಿಗಾಗಿ ಆಹ್ವಾನ (ಐ.ಎಫ್.ಟಿ) ಸಂಖ್ಯೆ: 09/2009–10, ದಿನಾಂಕ: 14ನೇ ಜುಲೈ 2009 (2ನೇ ಕರೆ)**

**ಸೆಕ್ಷನ್ – 1 ಟೆಂಡರುಗಳಿಗಾಗಿ ಅರ್ಜಿ ಆಹ್ವಾನ (IFT)**

**(ರಸ್ತೆ, ಸೇತುವೆ ಹಾಗೂ ಕಟ್ಟಡಗಳ ಕಾಮಗಾರಿಗಳಿಗಾಗಿ – ಸ್ಟಾಂಡರ್ಡ್ ಬಿಡ್ಡಿಂಗ್ ಡಾಕ್ಯುಮೆಂಟ್ ಕೆ/ಡಬ್ಲ್ಯೂ–3 ಮತ್ತು 4ರಂತೆ ದ್ವಿ–ಲಕೋಟೆ ಪದ್ಧತಿಯಲ್ಲಿ ಟೆಂಡರ್ ಆಹ್ವಾನ)**

1. ಈ ಕೆಳಗೆ ತಿಳಿಸಿದ ಕಾಮಗಾರಿಗಳಿಗಾಗಿ ಲೋಕೋಪಯೋಗಿ ಇಲಾಖೆಯಲ್ಲಿ ನೊಂದಾಯಿತ ಅರ್ಹ ಗುತ್ತಿಗೆದಾರರಿಂದ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ – 562 101 ರವರು ಮ್ಯಾನ್ಯೂಯಲ್ ಮೂಲಕ ರಾಜ್ಯಪಾಲರು, ಕರ್ನಾಟಕ ಸರ್ಕಾರ ರವರ ಪರವಾಗಿ ಐಟಮ್–ರೇಟ್ ಟೆಂಡರ್‌ಗಳನ್ನು, ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಮೂಲಕ ಅಧಿಸೂಚನೆಯಲ್ಲಿ ಸೂಚಿಸಿರುವ ದಿನಾಂಕದೊಳಗೆ (ದ್ವಿಲಕೋಟೆಗಳಲ್ಲಿ) ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್‌ಗಳನ್ನು ಟೆಂಡರ್ ದಾಸ್ತಾವೇಜಿನಲ್ಲಿರುವಂತೆ ಸಲ್ಲಿಸಬಹುದಾಗಿರುತ್ತದೆ. ಕಾಮಗಾರಿಗೆ ಬೇಕಾಗುವ ಕನಿಷ್ಟತಮ ಪೂರ್ವಾರ್ಹತೆಯ ಬಗ್ಗೆ ಟೆಂಡರ್ ದಾಸ್ತಾವೇಜಿನ ಭಾಗ–3ರಡಿ ಗುತ್ತಿಗೆದಾರರಿಗೆ ನೀಡಿರುವ ಸೂಚನೆಗಳನ್ನು ನೋಡಲು ಕೋರಲಾಗಿದೆ,
2. ಟೆಂಡರ್ ಡಾಕ್ಯೂಮೆಂಟ್‌ಗಳನ್ನು ಕರ್ನಾಟಕ ಸರ್ಕಾರದ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಅಂದರೆ https://eproc.karnataka.gov.in ಮೂಲಕ ದಿನಾಂಕ: 24.07.2009 ರಿಂದ 29.07.2009 ರವರಿಗೆ ಪಡೆಯ ಬಹುದಾಗಿರುತ್ತದೆ.
3. ಟೆಂಡರ್‌ನೊಂದಿಗೆ ಈ ಕೆಳಗಿನ ಕೋಷ್ಟಕದಲ್ಲಿ ನಮೂದಿಸಿರುವ ಇ.ಎಂ.ಡಿ. ಹಣವನ್ನು ಟೆಂಡರ್ ಅರ್ಹತಾ ಅವಧಿಯನ್ನು ಬಿಟ್ಟು ಹೆಚ್ಚಿನ 45 ದಿನಗಳ ಅವಧಿಯನ್ನು ಒಳಗೊಂಡಿರುವಂತೆ ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ತಿಳಿಸಿರುವ ರೂಪದಲ್ಲಿ ಪಾವತಿಸುವುದು.
4. ಟೆಂಡರ್‌ಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಆನ್‌ಲೈನ್ ಮೂಲಕ ದಿನಾಂಕ: 29.07.09 ರಂದು ಸಂಜೆ 4.00 ಗಂಟೆ ಒಳಗಾಗಿ ಸಲ್ಲಿಸತಕ್ಕದ್ದು. ಮತ್ತು ಸದರಿ ಟೆಂಡರ್‌ಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್ ಗೈಡ್‌ಲೈನ್‌ನಂತೆ / ಟೆಂಡರ್ ಅಧಿಸೂಚನೆಯಲ್ಲಿ ಸೂಚಿಸಿರುವಂತೆ ನಿಗದಿತ ಸಮಯದಲ್ಲಿ ತೆರೆಯಲಾಗುವುದು.
5. ಟೆಂಡರ್ ಪೂರ್ವ ಸಭೆಯನ್ನು ಕಾಮಗಾರಿ ಕ್ರಮ ಸಂಖ್ಯೆ–5ಕ್ಕೆ ದಿನಾಂಕ: 25.07.2009 ರಂದು ಮಧ್ಯಾಹ್ನ 3.00 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ ರವರ ಕಛೇರಿಯಲ್ಲಿ ನಡೆಸಲಾಗುವುದು.
6. ಹೆಚ್ಚಿನ ಮಾಹಿತಿಗಾಗಿ www.kpwd.gov.in ವೆಬ್‌ಸೈಟ್‌ನ್ನು ಸಂಪರ್ಕಿಸಬಹುದು ಅಥವಾ ಕಛೇರಿಯ ಕೆಲಸದ ವೇಳೆಯಲ್ಲಿ ಸಂಪರ್ಕಿಸಬಹುದು.

**ಕೋಷ್ಟಕ**

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. (ರೂ. ಲಕ್ಷಗಳಲ್ಲಿ) | ಟೆಂಡರ್ ಪ್ರೊಸೆಸಿಂಗ್ ಶುಲ್ಕ (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತುಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು |
|---|---|---|---|---|---|
| 1. | ಬಾಗೇಪಲ್ಲಿ ತಾ. ವೈ.ಸಿ. ರಸ್ತೆಯಿಂದ ಪಿ.ಬಿ.ಆರ್.ಸಿ.ಪಿ. ರಸ್ತೆ ಮಾರ್ಗ ಮೂಗಿರೆಡ್ಡಿಪಲ್ಲಿ, ಕೊತ್ತಕೋಟವಾಡ್ಲ ಪಲ್ಲಿ, ನಲ್ಲಸಾನಪಲ್ಲಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 75.00 | 1.50 | | 6 ತಿಂಗಳು |
| 2. | ಚಿಕ್ಕಬಳ್ಳಾಪುರ ತಾ. ಎ.ಡಿ. ರಸ್ತೆಯಿಂದ ಎಸ್.ಡಿ. ರಸ್ತೆ ಮಾರ್ಗ ನಲ್ಲಮರದಹಳ್ಳಿ, ಹಿರಿಯಣ್ಣನಹಳ್ಳಿ, ಬಡನಿಂಗನಹಳ್ಳಿ, ಶೆಟ್ಟಿಹಳ್ಳಿ, ಮಲ್ಲಹಳ್ಳಿ ರಸ್ತೆ ಅಭಿವೃದ್ಧಿ ಕಾಮಗಾರಿ | 86.00 | 1.72 | | 6 ತಿಂಗಳು |

| ಕ್ರ. ಸಂ. | ಕೆಲಸದ ಹೆಸರು | ಟೆಂಡರ್‌ಗಿಟ್ಟ ಮೊತ್ತ ರೂ.ಲಕ್ಷಗಳಲ್ಲಿ | ಇ.ಎಂ.ಡಿ. (ರೂ. ಲಕ್ಷಗಳಲ್ಲಿ) | ಟೆಂಡರ್ ಪ್ರೊಸೆಸಿಂಗ್ ಶುಲ್ಕ (ರೂ.ಗಳಲ್ಲಿ) | ಕಾಮಗಾರಿಯನ್ನು ಪೂರ್ಣಗೊಳಿಸಲು ಗೊತ್ತಪಡಿಸಲಾದ ಕಾಲಾವಧಿ ಮಳೆಗಾಲ ಸೇರಿ ಒಟ್ಟು |
|---|---|---|---|---|---|
| 3. | ಚಿಂತಾಮಣಿ ತಾ. ಎಸ್.ಬಿ.ಎ. ರಸ್ತೆಯಿಂದ ಚಿಂತಾಮಣಿ–ಚೇಳೂರು ರಸ್ತೆಗೆ ಸೇರುವ ರಸ್ತೆಯ ಮಾರ್ಗ ಯಸಗಳಹಳ್ಳಿ, ಮರಬಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 80.00 | 1.60 | ಇ–ಪೋರ್ಟಲ್ ಆಧಾರಿತ | 6 ತಿಂಗಳು |
| 4. | ಚಿಂತಾಮಣಿ ತಾ. ಅಟ್ಟೂರು–ಹೊಸಹಳ್ಳಿ ರಸ್ತೆಯಿಂದ ಬಿ.ಸಿ. ರಸ್ತೆಗೆ ಮಾರ್ಗ ವಿರೂಪಾಕ್ಷಪುರ, ಅಕ್ಕಿಮಂಗಲ ಹೆಣ್ಣೂರು, ಬಿರ್ಜೇನಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ) | 100.00 | 2.00 | | 6 ತಿಂಗಳು |
| 5. | ಗೌರಿಬಿದನೂರು ತಾ. ಗುಂಡಾಪುರದಿಂದ ಕೋಟಾಲದಿನ್ನೆ–ಅಲಿಪುರ ರಸ್ತೆಗೆ ಸೇರುವ ರಸ್ತೆಯ ಮಾರ್ಗ ಚೆನ್ನನಹಳ್ಳಿ, ಕೆ.ಟಿ.ಹಳ್ಳಿ, ಉಪ್ಪಾರಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 105.00 | 2.00 | | 6 ತಿಂಗಳು |
| 6. | ಶಿಡ್ಲಘಟ್ಟ ತಾ. ಗೊಲ್ಲಹಳ್ಳಿಯಿಂದ ಬಿ.ಬಿ. ರಸ್ತೆಯ ಮಾರ್ಗ ಕುಂದಲಗುರ್ಕಿ, ರೊಪ್ಪಾರ್ಲಹಳ್ಳಿ, ಗಂಗಾಪುರ, ಕಾಚಹಳ್ಳಿ (1ನೇ ಹಂತ) ರಸ್ತೆ ಅಭಿವೃದ್ಧಿ ಕಾಮಗಾರಿ | 79.50 | 1.60 | | 6 ತಿಂಗಳು |

**ಸೂಚನೆ: ಕಾಮಗಾರಿ ಸಂಖ್ಯೆ–5ರ ಬಗ್ಗೆ ಕೆ.ಡಬ್ಲ್ಯೂ–4 ದಸ್ತಾವೇಜಿನ ಸೂಚನೆಗಳನ್ನು ಪಾಲಿಸುವುದು.**

1. ಆಕ್ಷೇಪಣೆ–ಸಂದೇಹ ಮತ್ತು ವಿವರಣೆಗಳಿಗೆ ಕಡೆಯ ದಿನಾಂಕ: 25.07.2009 (ಸಂಜೆ 3.00 ಗಂಟೆಗೆ ಕಛೇರಿ ವೇಳೆಯಲ್ಲಿ)
2. ಭರ್ತಿಮಾಡಿದ ಟೆಂಡರ್‌ಗಳನ್ನು ಸಲ್ಲಿಸಲು ಕಡೆಯ ದಿನಾಂಕ: 29.07.2009 (ಸಂಜೆ 4.00 ಗಂಟೆಯವರೆಗೆ)
3. ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ: 01.08.2009 ಬೆಳಿಗ್ಗೆ 11.00 ಗಂಟೆಗೆ
4. ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ: 10.08.2009 ಬೆಳಿಗ್ಗೆ 11.00 ಗಂಟೆಗೆ

ಕಾರ್ಯನಿರ್ವಾಹಕ ಇಂಜಿನಿಯರ್,

ಪಿ.ಆರ್. 582 ಚಿಕ್ಕಬಳ್ಳಾಪುರ ಲೋ.ಇ. ವಿಭಾಗ, ಚಿಕ್ಕಬಳ್ಳಾಪುರ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ, ಯಲ್ಲಾಪುರ ವಿಭಾಗ, ಯಲ್ಲಾಪುರ**

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಚೇರಿ, ಯಲ್ಲಾಪುರ ವಿಭಾಗ, ಯಲ್ಲಾಪುರ.**

**ಕ್ರ.ಸಂ :ಎ7/ಹರಾಜು/2009–10, ದಿನಾಂಕ: 30ನೇ ಜೂನ್ 2009**

**ನಿರುಪಯುಕ್ತ ಹಾಗೂ ಅರಣ್ಯ ಅಪರಾಧಗಳಲ್ಲಿ ಒಳಗೊಂಡ, ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳ ಟೆಂಡರ್ ಕಮ್ ಹರಾಜಿನ ಕುರಿತಾದ ಷರತ್ತುಗಳು**

ಈ ಮೂಲಕ ಯಾವತ್ತೂ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಯಲ್ಲಾಪುರ ಅರಣ್ಯ ವಿಭಾಗದಲ್ಲಿ ಅರಣ್ಯ ಅಪರಾಧಗಳಲ್ಲಿ ಒಳಗೊಂಡ ಹಾಗೂ ಮುಟ್ಟುಗೋಲು ಹಾಕಿಕೊಳ್ಳಲಾದ ಹಾಗೂ ನಿರುಪಯುಕ್ತವಾದಂತಹ ಈ ಕೆಳಗೆ ನಮೂದಿಸಿದಂತ ವಾಹನಗಳನ್ನು ಬಹಿರಂಗವಾಗಿ ಟೆಂಡರ್ ಕಮ್ ಹರಾಜಿನ ಮೂಲಕ ವಿಲೇವಾರಿ ಮಾಡಲಾಗುವುದು. ಸದರಿ ನಿರುಪಯುಕ್ತ ಹಾಗೂ ಮುಟ್ಟುಗೋಲು ಹಾಕಿಕೊಳ್ಳಲಾದ ವಾಹನಗಳನ್ನು ಇದ್ದ ಸ್ಥಳದಲ್ಲಿಯೇ ಯಾವ ಸ್ಥಿತಿಯಲ್ಲಿ ಇವೆಯೋ ಅದೇ ಸ್ಥಿತಿಯಲ್ಲಿ ಹರಾಜು ಮಾಡಲಾಗುವುದು. ಕಾರಣ ಆಸಕ್ತಿಯುಳ್ಳವರು ಸದರಿ ಟೆಂಡರ್ ಕಮ್ ಹರಾಜಿನಲ್ಲಿ ಭಾಗವಹಿಸಿ ವಾಹನಗಳನ್ನು ಪಡೆದುಕೊಳ್ಳಬಹುದಾಗಿದೆ. ಟೆಂಡರ್ ಕಮ್ ಹರಾಜನ್ನು **ದಿನಾಂಕ : 12–08–2009** ರಂದು ಕರೆಯಲಾಗಿದ್ದು ಅದೇ ದಿನ ಮಧ್ಯಾಹ್ನ 3.00 ಘಂಟೆ ಸಮಯದ ನಂತರ ಮೊದಲು ಸವಾಲನ್ನು ಮಾಡಿ ನಂತರ ಟೆಂಡರ್‌ಗಳನ್ನು ತೆರೆಯಲಾಗುವುದು.

ಟೆಂಡರ್ ಕಮ್ ಸವಾಲನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಯಲ್ಲಾಪುರ ವಿಭಾಗ, ಯಲ್ಲಾಪುರ ರವರು ಸದರಿ ದಿನಾಂಕದಂದು ಖುದ್ದಾಗಿ ಅಥವಾ ಅವರಿಂದ ಅಧಿಕಾರವನ್ನು ಪಡೆದಂತಹ ಅಧಿಕಾರಿಗಳು ಯಲ್ಲಾಪುರ ವಿಭಾಗೀಯ ಕಛೇರಿಯಲ್ಲಿ ನೆರವೇರಿಸುವರು.

ಖರೀದಿದಾರರು ಸವಾಲಿನಲ್ಲಿ ಭಾಗವಹಿಸಿ ತಮ್ಮ ಅತೀ ಹೆಚ್ಚಿನ ಬೇಡಿಕೆಗಳನ್ನು ನೀಡಬಹುದು. ಅಥವಾ ಟೆಂಡರಿನಲ್ಲಿಯೂ ಸಹ ಭಾಗವಹಿಸಿ ತಮ್ಮ ಬೇಡಿಕೆ ನೀಡಬಹುದಾಗಿದೆ. ಹೀಗೆ ನೀಡಲಾದ ಬೇಡಿಕೆಗಳಲ್ಲಿ ಯಾವುದು ಹೆಚ್ಚು ಅದನ್ನು ಮಾತ್ರ ಪರಿಗಣಿಸಲಾಗುವುದು.

| ಕ್ರ. ಸಂ | ವಾಹನದ ವಿವರ | ವಾಹನ ಸಂಖ್ಯೆ | ಚೆಸ್ಸಿ ನಂ | ಇಂಜಿನ್ ನಂ | ವಾಹನದ ಮಾದರಿ | ವಾಹನ ಇರುವ ಸ್ಥಳ | ಷರಾ |
|---|---|---|---|---|---|---|---|
| 1 | ಮಾರುತಿ ಜಿಪ್ಸಿ | ಕೆಎ–01–ಜಿ –892 | SJ41IN146274 | F10AIN162251 | 12/1992 | ಉಪ ಅರಣ್ಯ ಸಂರಕ್ಷಣಾಧಿಕಾರಿ, ಯಲ್ಲಾಪುರ ರವರ ಕಛೇರಿ ಆವರಣ | ನಿರುಪಯುಕ್ತಗೊಳಿಸಿದ ಇಲಾಖಾ ವಾಹನ |
| 2 | ಮಾರುತಿ ಜಿಪ್ಸಿ | ಸಿಎಜಿ–9715 | SJ4IN105415 | F10AIN103068 | 2/1988 | .. ಸದರ .. | |
| 3 | HGV ಅಶೋಕ ಲೇಲ್ಯಾಂಡ್ | ಕೆಎ–27–1581 | RTE29059 | RTE172468 | 1993 | .. ಸದರ .. | ಇಲಾಖೆಗೆ ಮುಟ್ಟುಗೋಲು ಹಾಕಿಕೊಂಡಿರುವ ವಾಹನಗಳು |
| 4 | ರಿಕ್ಷಾ | ಕೆಎ–25–9598 | 22CBCLO2831 | -- | –– | .. ಸದರ .. | |
| 5 | ಅಶೋಕ ಲೇಲ್ಯಾಂಡ್ ಕಾಮೆಂಟ – AC–1611 | ಕೆಎ–07–1235 | NWE273472 | NUE153948 | 7/1992 | .. ಸದರ .. | |
| 6 | ಪ್ರಿಮಿಯರ್ ಪದ್ಮಿನಿ (ಫಿಯೇಟ್ ಕಾರ್) | ಸಿಟಿಇ–77 | PAXBEX451344 | PAX-F46796 | 1988 | .. ಸದರ .. | |
| 7 | ಎಲ್‌ಜಿವಿ ಟೆಲ್ಕೋ (ಮಿನಿಲಾರಿ 407) | ಕೆಎ–35–3354 | 357125KYZ815743 | 497SPTC31KYZ892594 | 2002 | .. ಸದರ .. | |
| 8 | ಬಜಾಜ್ ಎಂ–80 | ಕೆಎ–27 ಇ–5212 | 16C94L81622 | 16E94L82104 | –– | .. ಸದರ .. | |
| 9 | ಎಲ್‌ಜಿವಿ (ಟಾಟಾ 608) | ಕೆಎ–19–ಎ–5010 | 386125KZZ821904 | 497TC84KZZ769546 | 9/2000 | .. ಸದರ .. | |

**ದಿನಾಂಕ:12.08.2009 ರಂದು ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿಯಲ್ಲಿ ವಾಹನಗಳ ಟೆಂಡರ್ ಕಮ್ ಬಹಿರಂಗ ಹರಾಜಿನ ಷರತ್ತುಗಳು**

1. ಟೆಂಡರ್‌ಗಳನ್ನು ಇಲಾಖೆಯು ನಿರ್ದಿಷ್ಟಪಡಿಸಿದಂತಹ ಮುದ್ರಿತ ಫಾರಂನಲ್ಲಿಯೇ ಕೊಡತಕ್ಕದ್ದು ಇಂತಹ ಫಾರಂಗಳು ಈ ಕಛೇರಿಯಲ್ಲಿ ಲಭ್ಯವಿದ್ದು ಟೆಂಡರಿನ ದಿನದಂದು ಬೆಳಿಗ್ಗೆ 10.00 ರಿಂದ ಮಧ್ಯಾಹ್ನ 12.00 ಗಂಟೆಯವರೆಗೆ ಮಾತ್ರ ನೀಡಲಾಗುವುದು. ಪ್ರತಿ ಫಾರ್ಮಿನ ಮೌಲ್ಯ ರೂ. 500.00 ಹಾಗೂ ಚಾಲ್ತಿಯಲ್ಲಿರುವ ಇತರೇ ಕರಗಳನ್ನು ನೀಡಿ ಪಡೆಯಬಹುದಾಗಿದೆ. ಸದರಿ ಟೆಂಡರ್ ಫಾರಂಗಳನ್ನು ವರ್ಗಾವಣೆ ಮಾಡುವುದನ್ನು ನಿಷೇಧಿಸಲಾಗಿದೆ.
2. ಖರೀದಿದಾರರು ಕಾಲಂ ನಂ 5 ರಲ್ಲಿ ಈ ಮೇಲೆ ನಮೂದಿಸಿದಂತೆ ಪ್ರತಿ ವಾಹನಕ್ಕೆ ಅಮಾನತ್ ಮೊತ್ತವನ್ನು ಟೆಂಡರ್ ಹಾಕುವುದಾದರೆ ಡಿಡಿ ರೂಪದಲ್ಲಿ ಅಥವಾ ಹರಾಜಿನಲ್ಲಿ ಭಾಗವಹಿಸುವುದಾದರೆ ಡಿಡಿ/ನಗದು ರೂಪದಲ್ಲಿ ನೀಡುವುದು ಕಡ್ಡಾಯವಾಗಿರುತ್ತದೆ. (ಯಾವುದೇ ರಾಷ್ಟ್ರೀಕೃತ ಬ್ಯಾಂಕಿನ ಹುಂಡಿ) ಯಲ್ಲಾಪುರ ವ್ಯಾಪ್ತಿಯಲ್ಲಿರುವ ಬ್ಯಾಂಕುಗಳು.

3. ಪ್ರತಿ ವಾಹನಗಳನ್ನು ಪ್ರತ್ಯೇಕವಾದ ಯುನಿಟ್‌ಗಳೆಂದು ಪರಿಗಣಿಸಲಾಗಿದೆ. ಕಾರಣ ಖರೀದಿದಾರರು ಸದರಿ ವಾಹನಗಳ ಕುರಿತು ಟೆಂಡರ್ ಹಾಕುವುದಿದ್ದಲ್ಲಿ ಪ್ರತಿ ವಾಹನಕ್ಕೆ ಪ್ರತ್ಯೇಕವಾದ ಟೆಂಡರ್‌ನ್ನು ಕೊಡತಕ್ಕದ್ದು. ಒಂದು ವೇಳೆ ಒಂದಕ್ಕಿಂತ ಹೆಚ್ಚು ಟೆಂಡರುಗಳನ್ನು ಹಾಕುವುದಾದಲ್ಲಿ ಒಂದೇ ಲಕೋಟೆಯಲ್ಲಿ ಹಾಕಬಹುದಾಗಿದೆ.
4. ಇನ್ನು ಕೇವಲ ಸವಾಲಿನಲ್ಲಿ ಭಾಗವಹಿಸಲು ಇಚ್ಚಿಸುವವರು ಸವಾಲಿನ ಪೂರ್ವದಲ್ಲಿ ಅವರು ಎಷ್ಟು ವಾಹನಗಳ ಕುರಿತಾಗಿ ಸವಾಲನ್ನು ಮಾಡಲಿಚ್ಚಿಸುವರೋ ಅಂತಹ ವಾಹನಗಳ ಎದುರಿಗೆ ನಮೂದಿಸಿದ ಅಮಾನತ್ತು ರಕಂ ಹುಂಡಿ / ನಗದು ರೂಪದಲ್ಲಿ ಸವಾಲು ಮಾಡುವ ಅಧಿಕಾರಿಗಳ ಕಡೆಗೆ ಕೊಡಬೇಕು (ಯಾವುದೇ ರಾಷ್ಟ್ರೀಕೃತ ಹುಂಡಿ) ಯಲ್ಲಾಪುರ ವ್ಯಾಪ್ತಿಯ ಬ್ಯಾಂಕುಗಳು.
5. ಟೆಂಡರ್/ಸವಾಲಿನಲ್ಲಿ ಯಶಸ್ವಿಯಾದ ಖರೀದಿದಾರರು ಅದೇ ದಿನದಂದು ಅವರು ಖರೀದಿಸಿದ ವಾಹನಗಳ ಮೌಲ್ಯದ ಶೇಕಡಾ 50 ರಷ್ಟು ಹಾಗೂ ಒಟ್ಟು ಮೌಲ್ಯದ ಮೇಲೆ ಆಕರಣೆ ಮಾಡತಕ್ಕ ಇತರೇ ಕರಗಳನ್ನು ಪಾವತಿಸತಕ್ಕದ್ದು ಇನ್ನುಳಿದ ಬಾಕಿ ಶೇಕಡಾ 50 ರ ಮೌಲ್ಯವನ್ನು ಸವಾಲಿನ ದಿನದಿಂದ 30 ದಿನಗಳೊಳಗಾಗಿ ಪಾವತಿಸಿ ತಮ್ಮ ಸ್ವಂತ ಖರ್ಚಿನಲ್ಲಿ ವಾಹನವನ್ನು ಇದ್ದ ಸ್ಥಳದಿಂದ ಸಾಗಾಣಿಕೆ ಮಾಡಿಕೊಳ್ಳತಕ್ಕದ್ದು.
6. ವಾಹನಗಳನ್ನು ಕಛೇರಿ ಆವರಣದಲ್ಲಿ ಮುರಿಯುವುದು ಅಥವಾ ಅದರ ಭಾಗಗಳನ್ನು ಬೇರ್ಪಡಿಸಿ ತೆಗೆದುಕೊಂಡು ಹೋಗುವುದನ್ನು ನಿಷೇಧಿಸಿದೆ.
7. ಈ ಮೇಲೆ ನಮೂದಿಸಿದಂತೆ ವಾಹನ ಖರೀದಿದಾರರು ತಾವು ಖರೀದಿಸಿದ ವಾಹನಗಳ ಮೌಲ್ಯವನ್ನು ನಿಗದಿತ ಸಮಯದಲ್ಲಿ ಪಾವತಿಸದಿದ್ದಲ್ಲಿ ಅಂತಹ ವಾಹನಗಳನ್ನು ಅವರ ಜವಾಬ್ದಾರಿಯ ಮೇಲೆ ಮರು ಹರಾಜು ಮಾಡಲಾಗುವುದು ಒಂದು ವೇಳೆ ಮರು ಹರಾಜಿನಲ್ಲಿ ಸರಕಾರಕ್ಕೆ ಹಾನಿ ಸಂಭವಿಸಿದಲ್ಲಿ ಅದನ್ನು ಮೂಲ ಖರೀದಿದಾರರಿಂದ ಜಮೀನು ಮಹಸೂಲ ಬಾಕಿಯಂತೆ ಅಥವಾ ದಿವಾಣಿ ನ್ಯಾಯಾಲಯದ ಡಿಕ್ರಿಯಂತೆ ವಸೂಲು ಮಾಡಲಾಗುವುದು. ಮರು ಸವಾಲಿನಿಂದ ಲಾಭವಾದಲ್ಲಿ ಅದರ ಮೇಲೆ ಖರೀದಿದಾರರ ಹಕ್ಕು ಇರುವುದಿಲ್ಲ.
8. ಇನ್ನು ಎರಡಾವರ್ತಿ ಮೇಲೆ ಇಟ್ಟಂತಹ ಟೆಂಡರ್/ ಸವಾಲುದಾರರ ಬೇಡಿಕೆಯು ಮೇಲಾಧಿಕಾರಿಗಳಿಂದ ಮಂಜೂರು/ನಾ ಮಂಜೂರಿ ಆಗುವ ಪೂರ್ವದಲ್ಲಿ ಸವಾಲಿನ ದಿನದಿಂದ ಖರೀದಿದಾರರು ಖರೀದಿಸಿದ ಶೇಕಡಾ 50 ರಷ್ಟು ಮೌಲ್ಯ ಹಾಗೂ ಮೌಲ್ಯದ ಮೇಲೆ ಆಕರಣೆ ಮಾಡಬಹುದಾದಂತಹ ತೆರಿಗೆಯನ್ನು ಪಾವತಿ ಮಾಡಬೇಕು. ಇನ್ನುಳಿದ ಶೇಕಡಾ 50 ರ ಮೊತ್ತವನ್ನು ಮಂಜೂರಿ ತಿಳಿಸಿದ ದಿನಾಂಕದಿಂದ 7 ದಿನಗಳೊಳಗಾಗಿ ಈ ಕಛೇರಿಯಲ್ಲಿ ಪಾವತಿ ಮಾಡತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಅಂತಹ ವಾಹನಗಳನ್ನು ಮರು ಸವಾಲು ಮಾಡಲಾಗುವುದು. ಸದರಿ ಮರು ಸವಾಲಿನಲ್ಲಿ ಸರಕಾರಕ್ಕೆ ಹಾನಿ ಸಂಭವಿಸಿದಲ್ಲಿ ಅದನ್ನು ಮೂಲ ಖರೀದಿದಾರರಿಂದ ಜಮೀನು ಮಸೂಲ ಬಾಕಿಯಂತೆ ಅಥವಾ ದಿವಾಣಿ ನ್ಯಾಯಾಲಯದ ಡಿಕ್ರಿಯಂತೆ ವಸೂಲು ಮಾಡಲಾಗುವುದು. ಮರು ಸವಾಲಿನಿಂದ ಲಾಭವಾದಲ್ಲಿ ಅದರ ಮೇಲೆ ಖರೀದಿದಾರರ ಹಕ್ಕು ಇರುವುದಿಲ್ಲ.
9. ಎರಡಾವರ್ತಿ ಮೇಲಿಟ್ಟ ಟೆಂಡರ್/ ಸವಾಲಿನ ಬೇಡಿಕೆಗಳು ತಿರಸ್ಕೃತಗೊಂಡಲ್ಲಿ ಅಂತಹ ಖರೀದಿದಾರರು ಪಾವತಿಸಿದಂತಹ ಅಮಾನತ್ತು ಹಣ ಹಾಗೂ ಶೇಕಡಾ 50 ರ ಮೊತ್ತವನ್ನು ಮರು ಪಾವತಿ ಮಾಡಲಾಗುವುದು.
10. ಎರಡಾವರ್ತಿ ಮೇಲೆ ಇಟ್ಟಂತಹ ಖರೀದಿದಾರರ ಟೆಂಡರ್/ಸವಾಲನ್ನು ಮಂಜೂರಿಗಾಗಿ ನಿರೀಕ್ಷಿಸಿ ಮೇಲಾಧಿಕಾರಿಗಳಿಗೆ ಸಲ್ಲಿಸಿದ ಸಮಯದಲ್ಲಿ ಖರೀದಿದಾರರು ತಮ್ಮ ಬೇಡಿಕೆಯನ್ನು ಹಿಂದಕ್ಕೆ ಪಡೆದುಕೊಂಡಲ್ಲಿ ಟೆಂಡರ್ / ಸವಾಲಿನ ಜೊತೆಯಲ್ಲಿ ಇಟ್ಟಂತಹ ಅಮಾನತ್ ಹಣ ಹಾಗೂ ಶೇಕಡಾ 50 ರ ಮೌಲ್ಯವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಅಂತಹ ವಾಹನಗಳನ್ನು ಮರು ಸವಾಲು ಮಾಡಲಾಗುವುದು. ಒಂದು ವೇಳೆ ಮರು ಹರಾಜಿನಲ್ಲಿ ಸರಕಾರಕ್ಕೆ ಹಾನಿ ಸಂಭವಿಸಿದಲ್ಲಿ ಅದನ್ನು ಮೂಲ ಖರೀದಿದಾರರಿಂದ ಜಮೀನು ಮಹಸೂಲ ಬಾಕಿಯಂತೆ ಅಥವಾ ದಿವಾಣಿ ನ್ಯಾಯಾಲಯ ಡಿಕ್ರಿಯಂತೆ ವಸೂಲು ಮಾಡಲಾಗುವುದು. ಮರು ಸವಾಲಿನಿಂದ ಲಾಭವಾದಲ್ಲಿ ಅದರ ಮೇಲೆ ಖರೀದಿದಾರರ ಹಕ್ಕು ಇರುವುದಿಲ್ಲ.
11. ಯಶಸ್ವಿ ಖರೀದಿದಾರರು ವಾಹನದ ಮಾಲೀಕತ್ವದ ವರ್ಗಾವಣೆ ಕುರಿತು ತಮ್ಮ ಸ್ವಂತ ಖರ್ಚಿನಲ್ಲಿಯೇ ಸಂಬಂಧಿಸಿದ ಪ್ರಾದೇಶಿಕ ಸಾರಿಗೆ ಅಧಿಕಾರಿಗಳನ್ನು ಸಂಪರ್ಕಿಸಿ ತಮ್ಮ ಹೆಸರಿಗೆ ವರ್ಗಾವಣೆ ಮಾಡಿಕೊಳ್ಳತಕ್ಕದ್ದು. ಈ ಕುರಿತು ಈ ಕಛೇರಿಯಲ್ಲಿ ಲಭ್ಯವಿದ್ದ ವಾಹನಗಳ ದಾಖಲಾತಿಗಳನ್ನು ನೀಡಲಾಗುವುದು.
12. ಟೆಂಡರ್ ಕೊಡಲು ಇಚ್ಚಿಸುವವರು ಟೆಂಡರ್‌ನಲ್ಲಿರುವ ಕಾಲಂಗಳಲ್ಲಿ ಸ್ಪಷ್ಟವಾಗಿ ಹಾಗೂ ಸಮಂಜಸವಾಗಿ ಭರಿಸಿ ಶೀಲ್ ಬಂದ ಲಕೋಟೆಯಲ್ಲಿ ಲಕೋಟೆ ಮೇಲೆ 2009-10ನೇ ಸಾಲಿನಲ್ಲಿ ವಾಹನಗಳ ಕುರಿತಾದ ಟೆಂಡರ್

ಎಂದು ನಮೂದಿಸಿ ಈ ಕಛೇರಿಯಲ್ಲಿ ದಿನಾಂಕ: 12.08.2009 ರಂದು ಇಟ್ಟ ಟೆಂಡರ್ ಪೆಟ್ಟಿಗೆಯಲ್ಲಿ ಮಧ್ಯಾಹ್ನ 3.00 ಗಂಟೆಯ ಒಳಗಾಗಿ ಅಥವಾ ಅದರ ಪೂರ್ವದಲ್ಲಿ ಹಾಕತಕ್ಕದ್ದು.

13. ಸ್ವೀಕೃತವಾದ ಬೇಡಿಕೆ/ ಟೆಂಡರನ್ನು ಯಾವುದೇ ಕಾರಣವನ್ನು ನೀಡದೆ ಸವಾಲು ಮಾಡುವ ಅಧಿಕಾರಿಗಳು ತಿರಸ್ಕರಿಸಬಹುದಾಗಿದೆ.
14. ಪ್ರತಿ ವಾಹನಗಳಿಗೆ ನಿಗದಿಪಡಿಸಿದ ಇಎಂಡಿ ಮೊತ್ತವನ್ನು ಪಾವತಿಸಿದ ಖರೀದಿದಾರರಿಗೆ ಮಾತ್ರ ಸವಾಲು/ ಟೆಂಡರಿನಲ್ಲಿ ಭಾಗವಹಿಸಲು ಅನುಮತಿಸಲಾಗುವುದು.
15. ಟೆಂಡರ್ ಫಾರ್ಮಿನಲ್ಲಿ ಖರೀದಿದಾರರು ತಮ್ಮ ಪೂರ್ಣ ವಿಳಾಸ, ವಯಸ್ಸು ಹಾಗೂ ಸಹಿ ಮಾಡತಕ್ಕದ್ದು ಹಾಗೂ ತಮ್ಮ ಹೆಚ್ಚಿನ ದರವನ್ನು ಅಂಕಿ ಹಾಗೂ ಅಕ್ಷರಗಳಲ್ಲಿ ಸ್ಪಷ್ಟವಾಗಿ ನಮೂದಿಸಲು ಸೂಚಿಸಿದೆ.
16. ಟೆಂಡರ್/ಸವಾಲಿನ ಕುರಿತಾಗಿ ಯಾವುದೇ ತಕರಾರುಗಳು ಉದ್ಭವಿಸಿದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಯಲ್ಲಾಪುರ ವಿಭಾಗ, ಯಲ್ಲಾಪುರ ರವರ ನಿರ್ಧಾರವೇ ಅಂತಿಮ ಎಂದು ಪರಿಗಣಿಸಲಾಗುವುದು.
17. ಟೆಂಡರ್/ ಸವಾಲಿನಲ್ಲಿ ಭಾಗವಹಿಸಲು ಮಾನಸಿಕ ಸ್ವಸ್ಥತೆವುಳ್ಳವರು ಹಾಗೂ 18 ವರ್ಷಕ್ಕೆ ಮೇಲ್ಪಟ್ಟವರಿಗೆ ಮಾತ್ರ ಅನುಮತಿಸಲಾಗುವುದು.
18. ಖರೀದಿದಾರರು ಯಾವುದೇ ಅಪರಾಧಗಳಲ್ಲಿ ಒಳಗಾಗಿ ಶಿಕ್ಷೆ ಅನುಭವಿಸಿದವರೆಂದು ಅಥವಾ ನ್ಯಾಯಾಲಯದ ನಿಂದನೆಗೆ ಒಳಪಟ್ಟವರು ಎಂದು ತಿಳಿದು ಬಂದಲ್ಲಿ ಅಂತಹವರ ಟೆಂಡರ್/ ಹರಾಜನ್ನು ರದ್ದುಪಡಿಸಲಾಗುವುದು.
19. ವಾಹನಗಳ ವಿಲೇವಾರಿ ಪ್ರಕ್ರಿಯೆ ಪೂರ್ಣಗೊಳ್ಳುವವರೆಗೆ ಅವಶ್ಯವೆನಿಸಿದರೆ ಹೊಸದಾಗಿ ಯಾವುದೇ ಷರತ್ತನ್ನು ಸೇರಿಸಬಹುದು ಅಥವಾ ಪರಿಷ್ಕರಿಸಬಹುದು.
20. ಬಿಡ್ಡುದಾರರು ಮೂರು ಮತ್ತು ನಾಲ್ಕು ಚಕ್ರದ ಪ್ರತಿಯೊಂದು ವಾಹನದ ಬಿಡ್ಡಿಗೆ ರೂ. 10,000/– ಹಾಗೂ ದ್ವಿಚಕ್ರ ವಾಹನಗಳಿಗೆ ತಲಾ ರೂ. 5000/– ಗಳ ಮುಂಗಡ ಠೇವಣಿಯನ್ನು ಪ್ರತ್ಯೇಕವಾಗಿ ಹರಾಜು ಪ್ರಾರಂಭವಾಗುವ ಮುನ್ನ ಪಾವತಿಸಿ ರಶೀದಿಯನ್ನು ಪಡೆದು ಹರಾಜಿನಲ್ಲಿ ಭಾಗವಹಿಸತಕ್ಕದ್ದು.
21. ಟೆಂಡರ್ ಕಂ ಹರಾಜಿನಲ್ಲಿ ಭಾಗವಹಿಸುವ ಬಿಡ್ಡುದಾರರು ಚುನಾವಣಾ ಅಧಿಕಾರಿಗಳು ನೀಡಿದಂತೆ ಗುರುತಿನ ಚೀಟಿ, ಪಡಿತರ ಚೀಟಿ ಇಲ್ಲವೇ ಡ್ರೈವಿಂಗ್ ಲೈಸೆನ್ಸ್ ಇತ್ಯಾದಿಗಳ ಪ್ರತಿಯನ್ನು ಒಪ್ಪಿಸಿ ಭಾಗವಹಿಸತಕ್ಕದ್ದು.
22. ಟೆಂಡರ್ ಕಂ ಹರಾಜಿನಲ್ಲಿ ಜಯಶೀಲರಾದ ವ್ಯಕ್ತಿಗಳು ವಾಹನ ಖರೀದಿಸಿದ ಮೊತ್ತದ ಶೇ.50 ರಷ್ಟು ಹಣ ಮತ್ತು ಚಾಲ್ತಿ ದರ ತೆರಿಗೆಯನ್ನು ಹರಾಜು ಮುಗಿದ ಕೂಡಲೇ ಪಾವತಿ ಮಾಡತಕ್ಕದ್ದು.
23. ಹರಾಜನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಎಲ್ಲಾ ಅಧಿಕಾರವು ಈ ಕೆಳ ಸಹಿದಾರರಿಗೆ ಇದ್ದು ಎಲ್ಲಾ ವಿಚಾರಗಳಲ್ಲಿ ಅವರ ತೀರ್ಮಾನವೇ ಅಂತಿಮ ತೀರ್ಮಾನವಾಗಿರುತ್ತದೆ.
24. ಮೇಲೆ ತಿಳಿಸಿದ ವಾಹನಗಳು ಕೇವಲ ಅಂದಾಜು ಆಗಿದ್ದು, ಮೇಲೆ ಹೆಸರಿಸಿದ ವಾಹನಗಳಲ್ಲಿ ಯಾವುದಾದರೂ ವಾಹನಗಳನ್ನು ಇಲಾಖಾ ಉಪಯೋಗಕ್ಕಾಗಿ ಹಂಚಿಕೆ ಮಾಡಿದ್ದಲ್ಲಿ ಅಥವಾ ನ್ಯಾಯಾಲಯದಿಂದ ತಡೆಯಾಜ್ಞೆ ಬಂದಲ್ಲಿ ಅಥವಾ ಇನ್ನಾವುದೇ ಕಾರಣಕ್ಕಾಗಿ ವಾಹನಗಳನ್ನು ಟೆಂಡರ್ ಕಂ ಹರಾಜಿನಿಂದ ಕೈ ಬಿಡಲಾಗುವುದು.
25. ಟೆಂಡರ್ ಹಾಗೂ ಹರಾಜಿಗೆ ಪ್ರತ್ಯೇಕ ಇಎಂಡಿ ಕಟ್ಟತಕ್ಕದ್ದು. ಇಎಂಡಿ ಕಟ್ಟಿದ ವ್ಯಕ್ತಿಗಳಿಗೆ ಮಾತ್ರ ಹರಾಜಿನಲ್ಲಿ ಭಾಗವಹಿಸಲು ಅವಕಾಶವಿರುತ್ತದೆ.
26. ಹರಾಜಿನಲ್ಲಿ ಇಡಲಾದ ಈ ವಾಹನಗಳಿಗೆ ಹಿಂದಿನ ಆರ್.ಸಿ. ಮಾಲೀಕರು ಪಾವತಿಸಬೇಕಾದ ತೆರಿಗೆ ಬಾಕಿ ಇದ್ದಲ್ಲಿ ಈ ಕಛೇರಿ ಹೊಣೆಯಾಗುವುದಿಲ್ಲ. ಹಾಗೂ ಅದರ ಬಾಕಿಗಳನ್ನು ಖರೀದಿದಾರರೇ ಪಾವತಿಸಬೇಕಾಗುತ್ತದೆ.
27. ಹೆಚ್ಚಿನ ವಿವರಗಳನ್ನು ಈ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದಾಗಿರುತ್ತದೆ.

**ಅಶೋಕ ಬಿ. ಬಸರಕೋಡ**

ಪಿ.ಆರ್. 570 ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಯಲ್ಲಾಪುರ ವಿಭಾಗ, ಯಲ್ಲಾಪುರ

**KARNATAKA URBAN WATER SUPPLY & DRAINAGE BOARD**

**No. 6, Jala Bhavan, B.T.M. Layout, 1st Stage, Bannerughatta Main Road, Bangalore – 560 029**

**NOTIFICATION**

Smt **U.L. LALITHA** Working as TYPIST in the Office of the Managing Director, Karnataka Urban Water Supply and Drainage Board, Bangalore is permitted to change her Name to Smt. **LALITHA IYER**

Managing Director

P.D. 111 K.U.W.S. & D. Board, Bangalore.

**ಕಾರ್ಯಪಾಲಕ ಇಂಜಿನಿಯರ್‌ರವರ ಕಛೇರಿ**
**ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ**
**ಅಲ್ಪಾವಧಿ ಟೆಂಡರು ಅಧಿಸೂಚನೆ ಸಂ. 03:2009–10, ದಿನಾಂಕ: 25ನೇ ಮೇ 2009**
**3ನೇ ಕರೆ**

ಕರ್ನಾಟಕ ರಾಜ್ಯಪಾಲರ ಪರವಾಗಿ ಮೈಸೂರು ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗದ ಕಾರ್ಯಪಾಲಕ ಇಂಜಿನಿಯರ್‌ರವರಿಂದ ಈ ಮೇಲ್ಕಂಡ ಅಲ್ಪಾವಧಿ ಅಧಿಸೂಚನೆಯಡಿ ಆಹ್ವಾನಿಸಲಾಗಿದ್ದ, ಅಲ್ಪಾವಧಿ ಐಟಂವಾರು ಟೆಂಡರ್ ಅಧಿಸೂಚನೆ 2ನೇ ಕರೆಯನ್ನು ಆಹ್ವಾನಿಸಲಾಗಿದ್ದು, ಈ ಕೆಳಕಂಡ ಕಾಮಗಾರಿಗಳನ್ನು ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ (viz http://eproc.karnataka.gov.in) ದಿ: 14.07.2009 ರಿಂದ ದಿ: 25.07.2009ರ ಸಂಜೆ 4.00 ಗಂಟೆ ವರೆಗೆ ಡೌನ್‌ಲೋಡ್ ಮಾಡಿಕೊಳ್ಳಬಹುದಾಗಿರುತ್ತದೆ.

(1) ಟಿ.ನರಸೀಪುರ ತಾಲ್ಲೂಕು ತಲಕಾಡು–ವಿಜಯಪುರ–ಹೊಳೆಸಾಲು ರಸ್ತೆಯ ಸ. 0.00 ರಿಂದ 17.15 ಕಿ.ಮೀ. ರಸ್ತೆ ಅಭಿವೃದ್ಧಿ ಕಾಮಗಾರಿ (ಬೆಳಕವಾಡಿ ವರೆಗೆ) ಟೆಂಡರ್ ಆಹ್ವಾನಿಸಲಾಗಿದ್ದು, ಟೆಂಡರಿಗಿಟ್ಟ ಮೊತ್ತ ರೂ. 3110.00 ಲಕ್ಷ, ಇ.ಎಂ.ಡಿ. 31.10 ಲಕ್ಷ ಮೇಲಿನ ಕಾಮಗಾರಿಗಳ ಟೆಂಡರ್ ಫಾರಂ ಬೆಲೆ ರೂ. 7500 + ಶೇ. 10 ರಷ್ಟು ತೆರಿಗೆ (ಪ್ರತ್ಯೇಕ) ಮತ್ತು ಮೇಲಿನ ಎಲ್ಲಾ ಕಾಮಗಾರಿಗಳಿಗೆ 1ನೇ ದರ್ಜೆ ಗುತ್ತಿಗೆದಾರರು ಭಾಗವಹಿಸಬಹುದು. (2) ಟಿ.ನರಸೀಪುರ ತಾಲ್ಲೂಕು ಮಾದಾಪುರ–ತಲಕಾಡು–ಸರಗೂರು ಹ್ಯಾಂಡ್ ಪೋಸ್ಟ್ ರಸ್ತೆಯ ಸ. 4.70 ರಿಂದ 16.60 ಕಿ.ಮಿ. ವರೆಗೆ ಅಭಿವೃದ್ಧಿ ಕಾಮಗಾರಿ ಟೆಂಡರ್ ಆಹ್ವಾನಿಸಲಾಗಿದ್ದು, ಟೆಂಡರಿಗಿಟ್ಟ ಮೊತ್ತ ರೂ. 1917.00 ಲಕ್ಷ, ಇ.ಎಂ.ಡಿ. 19.17 ಲಕ್ಷ. ಇ–ಪ್ರೊಕ್ಯೂರ್‌ಮೆಂಟ್ ಪೋರ್ಟಲ್‌ನಲ್ಲಿ ಟೆಂಡರ್ ಸಲ್ಲಿಸಲು ದಿನಾಂಕ: 25.07.2009ರಂದು ಸಂಜೆ 4.00 ಗಂಟೆಗೆ ಟೆಂಡರ್ ಸಲ್ಲಿಸಲು ಕಡೆಯ ದಿನವಾಗಿರುತ್ತದೆ. ಮತ್ತು ಕಾಮಗಾರಿಗಳಿಗೆ ಸಂಬಂಧಿಸಿದಂತೆ ಹೆಚ್ಚಿನ ವಿವರಗಳು ಬೇಕಾದಲ್ಲಿ ಕೆಳಗೆ ಸಹಿ ಮಾಡಿರುವವರ ಕಛೇರಿಯಲ್ಲಿ ಕೆಲಸದ ವೇಳೆಯಲ್ಲಿ ಪಡೆಯಬಹುದು.

ಕಾರ್ಯಪಾಲಕ ಇಂಜಿನಿಯರ್,
ಲೋ. ಬಂ. ಮತ್ತು ಒ. ಜ. ಸಾರಿಗೆ ಇಲಾಖೆ, ಮೈಸೂರು ವಿಭಾಗ, ಮೈಸೂರು

**PUBLIC WORKS, PORTS & INLAND WATER TRANSPORT DEPARTMENT**
**INVITATION FOR SHORT TERM TENDERS**
**No. EE/ PWD, Mysore Division, Mysore IFT No. 03/ 2009-10, Dt. 25th May 2009.**
**CALL - 3**

1. The Executive Engineer, Public works, Ports & Inland Water Transport Department, Mysore Division invites tenders from eligible tenderers in **TWO COVER SYSTEM** for the road works detailed in the table through e-procurement portal of the Government of Karnataka **(viz http://eproc.karnataka.gov.in)** The tenderers are advised to note the minimum qualification criteria specified in clause-3 of the Instructions to Tenderers to qualify for award of the contract.

2. Tender documents may be downloaded from the e-procurement portal of the Government of Karnataka from **14.07.2009 to 25.07.2009**

3. Tenders must be accompanied by earnest money deposit specified for the work in the table below. Earnest money deposit will have to be in any one of the forms as per the instructions in the e-procurement portal and shall have to be valid for **45 days** beyond the validity of the tender.

4. Tenders must be submitted online through e-procurement portal on or before **16.00 hours** on **25.07.2009** and the opening of the tenders will be as per the e-procurement portal guidelines.

5. Other details and conditions can be seen in the tender documents.

**TABLE**

| Sl. No. | Name of the Work | Form No. | Approximate value of work (Rs. in lakhs) | Earnest money deposit (Rs. in lakhs) | Cost of document (Rs.) | Period of completion including rainy season | Contractor eligibility |
|---|---|---|---|---|---|---|---|
| 1 | Impt, & Strengthening of Talakadu-Vijayapura-Holesalu road from ch. 0.00 to 17.15 Km in T.Narasipura Taluk (upto Belakavadi) | K/W-4 | 3110.00 | 31.10 | 7500.00 | 4 Months | Class-1 |
| 2 | Impt, & Strengthening of Madapur-Talakadu-Sargur Hand post road from ch. 4.70 to 16.60 Km in T.Narasipura Taluk. | K/W-4 | 1917.00 | 19.17 | 7500.00 | 4 Months | Class-1 |

P.R. 586 Executive Engineer, P.W.P. & I.W.T. Department, Mysore Division, Mysore

**ರಾಷ್ಟ್ರೀಯ ಹೆದ್ದಾರಿಗಳು ಲೋಕೋಪಯೋಗಿ ಇಲಾಖೆ**

**ಸಂಖ್ಯೆ:ಕಾಅ:ರಾಹೆವಿಬೆಂ:ಯಂ:ಹರಾಜು:2009–10**

**ಟೆಂಡರ್ ಹಾಗೂ ಬಹಿರಂಗ ಹರಾಜು ಪ್ರಕಟಣೆ ಸಂ:4:2009–10, ದಿನಾಂಕ: 26ನೇ ಜೂನ್ 2009**

**ಸಾರ್ವಜನಿಕರಿಂದ ಈ ಕೆಳಗಿನ ವಾಹನ : ಯಂತ್ರೋಪಕರಣಗಳನ್ನು ಎಲ್ಲಿದೆಯೋ ಹೇಗಿದೆಯೋ ಅದೇ ಸ್ಥಿತಿಯಲ್ಲಿ ಕೆಳಕಂಡ ಸ್ಥಳಗಳಲ್ಲಿ ವಿಲೇವಾರಿ ಮಾಡಲು ಮೊಹರು ಮಾಡಿದ ಟೆಂಡರ್‌ಗಳನ್ನು (ದ್ವಿಪ್ರತಿಗಳಲ್ಲಿ) ಸ್ವೀಕರಿಸಲಾಗುವುದು**

| ಕ್ರ. ಸಂ. | ಯಂತ್ರೋಪಕರಣಗಳ ವಿವರ ಹಾಗೂ ಯಂತ್ರಗಳು ಇರುವ ಸ್ಥಳ | ಪರಿಮಾಣ | ನಿಗದಿಪಡಿಸಿದ ಮೌಲ್ಯ | ಠೇವಣಿ ನಗದು ಅಥವಾ ಡಿಮಾಂಡ್ ಡ್ರಾಫ್ಟ್ ಮೊತ್ತ ರೂ.ಗಳಲ್ಲಿ (ನಗದು ಸ್ವೀಕರಿಸಲಾಗುವುದಿಲ್ಲ) | ಟೆಂಡರ್ ದಾಖಲಾತಿಗಳ ಬೆಲೆ (ಹಿಂದಿರುಗಿಸ ಲಾಗುವುದಿಲ್ಲ) ಡಿಮಾಂಡ್ ಡ್ರಾಫ್ಟ್ ರೂ.ಗಳಲ್ಲಿ (ನಗದು ಸ್ವೀಕರಿಸಲಾಗುವುದಿಲ್ಲ) | ಟೆಂಡರ್‌ಗಾಗಿ ಅರ್ಜಿ ಸೀಕರಿಸಲಾಗುವ ಕೊನೆಯ ದಿನಾಂಕ | ಖಾಲಿ ಟೆಂಡರ್ ದಾಖಲಾತಿಗಳನ್ನು ನೀಡುವ ಅಂತಿಮ ದಿನ | ಭರ್ತಿಮಾಡಿ ಮೊಹರ್ ಮಾಡಿರುವ ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ | ಬಹಿರಂಗ ಹರಾಜು ಮಾಡಲಾಗುವ ದಿನಾಂಕ |
|---|---|---|---|---|---|---|---|---|---|
| 1 | ಡಿಆರ್‌ಆರ್–ಜೆ–4350 ರಾಹೆ ಉಪವಿಭಾಗ, ಮೈಸೂರು ಪಿಡಬ್ಲ್ಯೂಡಿ ಡಿವಿಜನ್ ಯಾರ್ಡ್, ಮೈಸೂರು | ಒಂದು | ರಹಸ್ಯವಾಗಿ ಇಡಲಾಗಿದೆ | 4000.00 | 500+12.50% VAT | 6.08.2009 ರಂದು ಬೆಳಿಗ್ಗೆ 11.00 ಗಂಟೆಯವರೆಗೆ | 6.08.2009 ರಂದು ಬೆಳಿಗ್ಗೆ 11.30 ಗಂಟೆಯವರೆಗೆ | 6.08.2009 ರಂದು 12.00 ಗಂಟೆಯವರೆಗೆ | 6.08.2009 ರಂದು ಪೂರ್ವಾಹ್ನ 12.30 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್ ರಾಹೆ ವಿಭಾಗ ಬೆಂಗಳೂರು ರವರ ಕಛೇರಿಯಲ್ಲಿ |
| 2 | ಟಿಪ್ಪರ್ ಎಂಇಡಿ–570 ರಾಹೆ ಉಪವಿಭಾಗ ಮೈಸೂರು ಪಿಡಬ್ಲ್ಯೂಡಿ ಡಿವಿಜನ್ ಯಾರ್ಡ್, ಮೈಸೂರು | ಒಂದು | ರಹಸ್ಯವಾಗಿ ಇಡಲಾಗಿದೆ | 4000.00 | 500+12.50% VAT | 6.08.2009 ರಂದು ಬೆಳಿಗ್ಗೆ 11.00 ಗಂಟೆಯವರೆಗೆ | 6.08.2009 ರಂದು ಬೆಳಿಗ್ಗೆ 11.30 ಗಂಟೆಯವರೆಗೆ | 6.08.2009 ರಂದು 12.00 ಗಂಟೆಯವರೆಗೆ | 6.08.2009 ರಂದು ಪೂರ್ವಾಹ್ನ 12.30 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್ ರಾಹೆ ವಿಭಾಗ ಬೆಂಗಳೂರು ರವರ ಕಛೇರಿಯಲ್ಲಿ |
| 3 | ಡಿಆರ್‌ಆರ್ ಸ್ಕೋಡಾ ರಾಹೆ ಉಪವಿಭಾಗ, ಬೆಂಗಳೂರು, (ಲೋ.ಇ.) ಯಶವಂತಪುರ ಯಾಂತ್ರಿಕ ಸಂಸ್ಥೆ ಉಪವಿಭಾಗ ಯಾರ್ಡ್, ಬೆಂಗಳೂರು | ಒಂದು | ರಹಸ್ಯವಾಗಿ ಇಡಲಾಗಿದೆ | 4000.00 | 500+12.50% VAT | 6.08.2009 ರಂದು ಬೆಳಿಗ್ಗೆ 11.00 ಗಂಟೆಯವರೆಗೆ | 6.08.2009 ರಂದು ಬೆಳಿಗ್ಗೆ 11.30 ಗಂಟೆಯವರೆಗೆ | 6.08.2009 ರಂದು 12.00 ಗಂಟೆಯವರೆಗೆ | 6.08.2009 ರಂದು ಪೂರ್ವಾಹ್ನ 12.30 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್ ರಾಹೆ ವಿಭಾಗ ಬೆಂಗಳೂರು ರವರ ಕಛೇರಿಯಲ್ಲಿ |

ಕಾರ್ಯಪಾಲಕ ಇಂಜಿನಿಯರ್,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಬೆಂಗಳೂರು.

**ಷರತ್ತು ಮತ್ತು ನಿಬಂಧನೆಗಳು:**

1. ಈ ಕಛೇರಿಯಿಂದ ನಿಗದಿಪಡಿಸಿದ ಟೆಂಡರ್ ನಮೂನೆಯನ್ನು ರೂ.500+12.50%(VAT) (ಹಿಂದಿರುಗಿಸಲಾಗುವುದಿಲ್ಲ) ಒಟ್ಟು ಮೊತ್ತ ರೂ.562.50 ಗಳನ್ನು ಡಿಡಿ ಮುಖಾಂತರ, ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಬೆಂಗಳೂರು ಇವರ ಹೆಸರಿಗೆ ಸಂದಾಯ ಮಾಡಿ ನಿಗದಿತ ದಿನಾಂಕದಂದು ಪಡೆಯಬಹುದು. ಟೆಂಡರ್‌ಗಳನ್ನು ಅಂಚೆ ಮೂಲಕ ಕಳುಹಿಸಲಾಗುವುದಿಲ್ಲ ಹಾಗೂ 'ನಗದು ಮೊತ್ತವನ್ನು' ಸ್ವೀಕರಿಸಲಾಗುವುದಿಲ್ಲ.
2. ಭರ್ತಿ ಮಾಡಿದ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ ನಿಗದಿಪಡಿಸಿದ ಠೇವಣಿಯೊಂದಿಗೆ ಸಲ್ಲಿಸತಕ್ಕದ್ದು ಮತ್ತು ನಮೂದಿಸುವ ಬೆಲೆಯ ಶೇ.50 ರಷ್ಟನ್ನು ಹಾಗೂ ಶೇ.4 ಮಾರಾಟ ತೆರಿಗೆ ಸೇರಿ ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಬೆಂಗಳೂರು ಇವರ ಹೆಸರಿನಲ್ಲಿ ಡಿಡಿ ರೂಪದಲ್ಲಿ ಸಲ್ಲಿಸತಕ್ಕದ್ದು. ಒಂದು ವೇಳೆ ಈ ಡಿಮ್ಯಾಂಡ್ ಡ್ರಾಫ್ಟ್‌ನ್ನು ಟೆಂಡರ್‌ನೊಂದಿಗೆ ಸಲ್ಲಿಸಲು ಸಾಧ್ಯವಾಗದೇ ಹೋದಲ್ಲಿ, ಟೆಂಡರ್‌ದಾರರು ಟೆಂಡರ್ ತೆರೆದಾಗ, ಅವರ ಟೆಂಡರ್ ಮೊತ್ತ ಗರಿಷ್ಠವಾಗಿದ್ದಲ್ಲಿ, ಸದರಿ ಮೊತ್ತವನ್ನು ಡಿ.ಡಿ.ರೂಪದಲ್ಲಿ ಸಂದಾಯ ಮಾಡಲು ಹಾಜರಿರತಕ್ಕದ್ದು. ಈ ಮೇಲಿನ ಎರಡೂ ನಿಬಂಧನೆಗಳನ್ನು ಪಾಲಿಸದೇ ಇದ್ದ ಪಕ್ಷದಲ್ಲಿ, ಅವರ ಟೆಂಡರ್ ಮೊತ್ತವು ಅತೀ ಹೆಚ್ಚಿನದಾಗಿದ್ದರೂ ಸಹಾ ತಿರಸ್ಕರಿಸಲಾಗುವುದು. ಮೊಹರು ಮಾಡಿದ ಟೆಂಡರ್‌ಗಳನ್ನು ಈ ಕಛೇರಿಯಲ್ಲಿ ದಿ:06.08.2009ರಂದು ಅಪರಾಹ್ನ 12.00 ಗಂಟೆಯವರೆಗೆ ಸ್ವೀಕರಿಸಲಾಗುವುದು. ಟೆಂಡರ್‌ದಾರರು ಮೊಹರು ಮಾಡಿದ ಲಕೋಟೆಯ ಮೇಲೆ ತಪ್ಪದೇ "ಸಂಬಂಧಿಸಿದ ವಾಹನದ ಹೆಸರು ಹಾಗೂ ವಾಹನ ಸಂಖ್ಯೆ ಬರೆದು ಅದರ ವಿಲೇವಾರಿಗಾಗಿ ಟೆಂಡರ್" ಎಂದು ನಮೂದಿಸತಕ್ಕದ್ದು. ಮೊಹರು ಮಾಡಿದ ಟೆಂಡರ್‌ಗಳನ್ನು ದಿ:06.08.2009 ರಂದು ಮಧ್ಯಾಹ್ನ 12.30 ಗಂಟೆಗೆ ಈ ಕಛೇರಿಯಲ್ಲಿ ನಡೆಸುವ ಬಹಿರಂಗ ಹರಾಜಿನ ನಂತರ ಸ್ವೀಕರಿಸಲಾದ ಟೆಂಡರ್‌ಗಳನ್ನು ತೆರೆಯಲಾಗುವುದು. ಒಂದು ವೇಳೆ ಆ ದಿನ ಹರಾಜು ನಡೆಸಲು ಸಾಧ್ಯವಾಗದಿದ್ದಲ್ಲಿ ಮುಂದಿನ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.
3. ಮೇಲೆ ತಿಳಿಸಿರುವ ದಿನಾಂಕಗಳಲ್ಲಿ ಯಾವುದಾದರೂ ಸಾರ್ವಜನಿಕ ರಜೆ ಆಗಿದ್ದಲ್ಲಿ ಮುಂದಿನ ಕೆಲಸದ ದಿನವು ಅನ್ವಯವಾಗುತ್ತದೆ.
4. ಟೆಂಡರ್‌ನ್ನು ಅಂತಿಮವಾಗಿ ಒಪ್ಪುವ ಅಥವಾ ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಧಿಕಾರವನ್ನು ಸಕ್ಷಮ ಪ್ರಾಧಿಕಾರ ಹೊಂದಿರುತ್ತದೆ.
5. ಬಹಿರಂಗ ಹರಾಜು ದಿ: 06.08.2009 ರಂದು ಮಧ್ಯಾಹ್ನ 12.30 ಗಂಟೆಗೆ ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಬೆಂಗಳೂರು, ಇವರ ಕಛೇರಿಯಲ್ಲಿ ನಡೆಯಲಿದ್ದು ಮೊಹರು ಮಾಡಿದ ಟೆಂಡರ್ ಸಲ್ಲಿಸಿರುವ ಟೆಂಡರ್‌ದಾರರೊಂದಿಗೆ ಬೇರೆ ಯಾರಾದರೂ ನಿಗದಿತ ಠೇವಣಿಯನ್ನು ಪ್ರತಿಯೊಂದು ವಾಹನ / ಯಂತ್ರಕ್ಕೆ ಬೇರೆ ಬೇರೆಯಾಗಿ ಹರಾಜಿನ ಮೊಬಲಗಿನ ಡಿಡಿ ಯನ್ನು ಸಂದಾಯ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು.
6. ಯಶಸ್ವಿ ಬಿಡ್ಡುದಾರರು ಸ್ಥಳದಲ್ಲಿಯೇ ಪ್ರತಿಯೊಂದು ವಾಹನ/ಯಂತ್ರಕ್ಕೆ ಬಿಡ್ಡಿನ ಶೇ.50 ರಷ್ಟನ್ನು+ 4% ಮಾರಾಟ ತೆರಿಗೆ ಮೊತ್ತವನ್ನು ಪಾವತಿಸತಕ್ಕದ್ದು.
7. ಸಕ್ಷಮ ಪ್ರಾಧಿಕಾರದಿಂದ ಬಹಿರಂಗ ಹರಾಜಿನಲ್ಲಿಯ ಹಾಗೂ ಟೆಂಡರ್‌ದಾರರಲ್ಲಿನ ಅತೀ ಹೆಚ್ಚಿನ ಬಿಡ್ಡುದಾರರು ದರದ ಮಂಜೂರಾತಿಯನ್ನು ಪಡೆದ ನಂತರ, ಯಶಸ್ವಿ ಬಿಡ್ಡುದಾರರು, ಬಾಕಿ ಉಳಿದ ಮೊತ್ತವನ್ನು ತೆರಿಗೆಸಹಿತ ಸಂದಾಯ ಮಾಡಿ ಸಂಬಂಧಿಸಿದ ವಾಹನ/ ಯಂತ್ರವನ್ನು ವಿಳಂಬ ಮಾಡದೇ 15 ದಿನಗಳ ಅವಧಿಯಲ್ಲಿ ಒಯ್ಯತಕ್ಕದ್ದು. ತಪ್ಪಿದಲ್ಲಿ, ಸದರಿ ವಾಹನ ಯಂತ್ರಗಳ ಮೇಲೆ ದಂಡವನ್ನು ವಿಧಿಸಲಾಗುವುದು, ಇದಕ್ಕೂ ತಪ್ಪಿದಲ್ಲಿ, (ಮಂಜೂರಾತಿಯಾದ ಒಂದು ತಿಂಗಳ ನಂತರ) ಸದರಿ ಮೊಬಲಗನ್ನು ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ವಾಹನಗಳನ್ನು ನಿಮ್ಮ ವಶಕ್ಕೆ ನೀಡಲಾಗುವುದಿಲ್ಲ.
8. ಆಸಕ್ತಿಯುಳ್ಳ ಸಾರ್ವಜನಿಕರು ಹರಾಜಿಗೆ ಸಂಬಂಧಿಸಿದ ವಾಹನಗಳನ್ನು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ಟೆಂಡರ್ ಕಾಲಂ ಕ್ರ.ಸಂ.2 ರಲ್ಲಿ ನಮೂದಿಸಿರುವ ಸ್ಥಳದಲ್ಲಿ ವೀಕ್ಷಿಸಬಹುದು. ಈ ಯಂತ್ರಗಳ ಬಗ್ಗೆ ಇನ್ನೂ ಹೆಚ್ಚಿನ ವಿವರಗಳಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ಉಪವಿಭಾಗ, ಬೆಂಗಳೂರು: ಮೈಸೂರು ಇವರನ್ನು ಸಂಪರ್ಕಿಸಬಹುದು.

ಪಿ.ಆರ್. 546 ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಬೆಂಗಳೂರು.